

# ಭವ್ಯಾಮೃತ



ಕಾರ್ಕಳ ಜೈನ ಮಠಾಧಿಪತಿಗಳಾದ

ದಿ। ಸ್ವಸ್ತಿ ಶ್ರೀ ಮದಭಿನವ ಲಲಿತಕೀರ್ತಿ ಭಟ್ಟಾರಕ
ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರ
ಸಂಸ್ಮರಣಾರ್ಥ ಶಾಸ್ತ್ರದಾನ

10 - 10 - 1987

# ಪಂಚನಮಸ್ಕಾರ ಮಂತ್ರ ಮತ್ತು ಮಹಿಮೆ

### ಓಂ ಣಮೋ ಅರಿಹಂತಾಣಂ

ಆತ್ಮನ ಗುಣಗಳನ್ನು ಕೆಡಿಸುವ ಜ್ಞಾನಾವರಣ ಮೊದಲಾದ ಅರಿ - ವೈರಿಗಳನ್ನು ಜಯಿಸಿದ ಅರಹಂತರಿಗೆ ನಮಸ್ಕಾರ.

### ಣಮೋ ಸಿದ್ಧಾಣಂ

ಸಕಲ ಕರ್ಮಗಳನ್ನು ನಾಶಮಾಡಿ ಶುದ್ಧಾತ್ಮರಾದ, ಮುಕ್ತಿಯ ಸಿದ್ಧಿಯನ್ನು ಪಡೆದ ಸಿದ್ಧ ಪರಮೇಷ್ಠಿಗಳಿಗೆ ನಮಸ್ಕಾರ.

### ಣಮೋ ಆಯಿರಿಯಾಣಂ

ಪಂಚವಿಧದ ಆಚಾರಗಳನ್ನು ಪಾಲಿಸುತ್ತಾ, ಜ್ಞಾನ, ಧ್ಯಾನಗಳ ಆರಾಧನೆಯಲ್ಲಿ ನಿರತರಾದ ಆಚಾರ್ಯರಿಗೆ ನಮಸ್ಕಾರ.

### ಣಮೋ ಉವಜ್ಝಾಯಾಣಂ

ಜಿನಧರ್ಮದ ಸಾರತತ್ತ್ವಗಳನ್ನು ಭವ್ಯರಾದ ಜನಸಮೂಹಕ್ಕೆ ಪ್ರೀತಿಯಿಂದ ಉಪದೇಶಿಸುವ ಉಪಾಧ್ಯಾಯರಿಗೆ ನಮಸ್ಕಾರ.

### ಣಮೋ ಲೋಏ ಸವ್ವಸಾಹೂಣಂ

ತನ್ನ ಆತ್ಮಕಲ್ಯಾಣದ ಹಾದಿಯಲ್ಲಿ ಸದಾ ಪರಮಾತ್ಮ ಸ್ಮರಣೆಯನ್ನು ಮಾಡುವ ಲೋಕದ ಎಲ್ಲ ಸಾಧು-ಸಂತರಿಗೆ ನಮಸ್ಕಾರ.

ಮಂತ್ರಂ ಸಂಸಾರಸಾರಂ, ತ್ರಿಜಗದನುಪಮಂ, ಸರ್ವಪಾಪಾರಿ ಮಂತ್ರಂ ।
ಸಂಸಾರೋಚ್ಛೇದಮಂತ್ರಂ, ವಿಷಮವಿಷಹರಂ, ಕರ್ಮನಿರ್ಮೂಲಮಂತ್ರಂ ॥
ಮಂತ್ರಂ ಸಿದ್ಧಿಪ್ರಧಾನಂ ಶಿವಸುಖಜನನಂ ಕೇವಲಜ್ಞಾನ ಮಂತ್ರಂ।
ಮಂತ್ರಂ ಶ್ರೀ ಜೈನಮಂತ್ರಂ ಜಪಜಪಜಪಿತಂ ಪಂಚಕಲ್ಯಾಣ ಮಂತ್ರಂ ॥

ಪಂಚಪದಂ ಭವಭವದೊಳ್ ।
ಸಂಚಿತ ಪಾಪಮನೆ ಕೆಡಿಸಲಾರ್ಕುಮಮೋಘಂ ॥
ಪಂಚಮಗತಿಗಿರದೊಯ್ಗುಂ ।
ಪಂಚಪದಾಕ್ಷರದ ಮಹಿಮೆ ಸಾಧಾರಣಮೇ ? ॥

ಸಾರಂಗಳ್ ಪಂಚನಮ – ।
ಸ್ಕಾರಂಗಳ್ ಭವ್ಯಜನಾಲಂಕಾರಂಗಳ್ ॥
ಹಾರಂಗಳ್ ಶ್ರುತಲಕ್ಷ್ಮೀ – ।
ಸಾರಂಗಳ್ ಮುಕ್ತಿಸುಖದ ನೆನೆವರ್ಗಕ್ಕೆ ॥

ಈ ಪಂಚನಮಸ್ಕಾರ ಮಂತ್ರವನ್ನು ನಿತ್ಯ ಪ್ರಾತಃಕಾಲ - ಮತ್ತು ಸಂಧ್ಯಾಕಾಲದಲ್ಲಿ ೧೦೮ ಬಾರಿ ಜಪಿಸಿದರೆ ಎಲ್ಲ ವಿಘ್ನಗಳು ದೂರವಾಗಿ ಮುಂದೆ ಸದ್ಗತಿ ಪ್ರಾಪ್ತವಾಗುವುದು,

ಶ್ರೀ ಚಂದ್ರನಾಥಾಯ ನಮಃ

# ಭವ್ಯಾಮೃತ



ಸಂಪಾದಕರು:

ಪಂಡಿತ ಬಿ. ದೇವಕುಮಾರ ಜೈನ,
ಮೂಡುಬಿದಿರೆ ದ. ಕ.

ಪ್ರಕಾಶಕರು:

ಚಂದಯ್ಯ ಪಡಿವಾಳರು,
ಕಾರ್ಕಳ ಹೋಬಳಿ ಗುರಿಕಾರ ಮತ್ತು ಸಮಸ್ತ ಜೈನ ಬಾಂಧವರು.

ಕಾರ್ಕಳದ ಜೈನ ಮಠಾಧಿಪತಿಗಳಾದ
ಸ್ವರ್ಗೀಯ ಸ್ವಸ್ತಿ ಶ್ರೀ ಲಲಿತಕೀರ್ತಿ ಭಟ್ಟಾರಕ
ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರ
ಸಂಸ್ಮರಣಾರ್ಥ ಶಾಸ್ತ್ರದಾನ.

ದಿನಾಂಕ 10-10-1987.

ಭವ್ಯಾಮೃತ

BHAVYAMRUTHA

ಪ್ರಥಮ ಮುದ್ರಣ: 1987 ಅಕ್ಟೋಬರ.

ಪ್ರತಿಗಳು: ೨೦೦೦.

ಪ್ರತಿ ದೊರೆಯುವ ಸ್ಥಳ:
**ದಾನಶಾಲಾ ಜೈನ ಮಠ, ಕಾರ್ಕಳ, ದ. ಕ.**

ಮುದ್ರಕರು:
**ಸಮತಾ ಮುದ್ರಣ, ಕಾರ್ಕಳ.**
**ಶ್ರೀ ಪದ್ಮಾಂಬಾ ಪ್ರಿಂಟರ್ಸ್, ಮೂಡುಬಿದ್ರಿ.**

ಬೆಲೆ: ಆತ್ಮಚಿಂತನ ಮತ್ತು ಆತ್ಮಕಲ್ಯಾಣ.

# ಮುನ್ನುಡಿ

'ಭವಿ'ಗೆ–ಸಂಸಾರಿಗೆ ಅಮೃತ ಉಂಡರೆ ಅಮರತ್ವ ಬರುತ್ತದಂತೆ. ಅಂತೆಯೇ 'ಭವ್ಯ' ಜೀವರಿಗೆ ೧೦ಲ ಕಂದಪದ್ಯಗಳ ಈ ಗ್ರಂಥ–ಭವ್ಯಾಮೃತ ಅಮೃತದಂತೆ ಅಮ-ರತ್ವಕ್ಕೆ ಕಾರಣ. ಆದುದರಿಂದಲೇ ಇದು 'ಭವ್ಯಾಮೃತ' ಎಂಬ ಅನ್ವರ್ಥ ಹೆಸರನ್ನು ಹೊತ್ತ ಸಾರ್ಥಕ ಗ್ರಂಥ. ಕವಿಯೇ ಹೇಳುವಂತೆ ಗೊಮ್ಮಟಸಾರ, ಸಮಯಸಾರವೇ ಮೊದಲಾದ ಪ್ರಾಭೃತಗ್ರಂಥಗಳ ಸಾರವನ್ನು ಹೀರಿ 'ಸಲ್ಲಲಿತ ಹೊಸಗನ್ನಡದೊಳು-ಮಲ್ಲದೆ ಕಷ್ಟಂಗಳಾದ ಭಾಷೆಗಳಿಲ್ಲಂ'– (ಕಂ–೬೭) ಎಂದು ಅತಿ ಸುಲಭ ಧಾಟಿಯ ಕಂದ ಪದ್ಯಗಳಲ್ಲಿ ಸುಲಿದ ಬಾಳೆಯಂತೆ ಅಧ್ಯಾತ್ಮದ-ತತ್ತ್ವವನ್ನು ತೆರೆದಿಟ್ಟಿದ್ದಾನೆ ಇಲ್ಲಿ.

ಗ್ರಂಥದ ಕರ್ತೃ ಯಾರೆಂದು ಈ ತನಕ ಖಚಿತ ತಿಳಿದಿರಲಿಲ್ಲ. ತುಮಕೂರಿನಲ್ಲಿ ನಡೆದ ಸನ್ಮತಿ ಸಾಹಿತ್ಯ ಪರಿಷತ್ತಿನ ಅಧಿವೇಶನದಲ್ಲಿ ತುಮಕೂರಿನವರೇ ಆದ ಶ್ರೀರಾಮ ಚಂದ್ರ ಸ್ಯಾದ್ವಾದಿ ಇವರು ಮಂಡಿಸಿದ ಪ್ರಬಂಧದಲ್ಲಿ– 'ಈ ಗ್ರಂಥವನ್ನು ತುಮಕೂರು ಬಳಿಯ ಬಿದಿರೆಯ ಬ್ರಹ್ಮಚಾರಿ ಶ್ರೀ ಚಂದ್ರಸಾಗರ ವರ್ಣಿಯವರು ರಚಿಸಿದರೆಂದು ದಾಖಲೆಗಳಿಂದ ವಿಶದ ಪಡಿಸಿದ್ದಾರೆ. ಚಂದ್ರಸಾಗರರು ಸಂಚಾರಪ್ರಿಯರು. ಅವರು ಕರ್ನಾಟಕದ ಶ್ರವಣಬೆಳುಗುಳ, ಕಾರ್ಕಳ, ಮೂಡುಬಿದಿರೆ, ವೇಣೂರು, ವರಾಂಗ ಮುಂತಾದ ಕ್ಷೇತ್ರಗಳಲ್ಲಿ ಠಿಕಾಣಿ ಹೂಡಿ, ಅಲ್ಲಿಯ ಶ್ರಾವಕರ ಒತ್ತಾಯದ ಅಪೇಕ್ಷೆ ಯಂತೆ ಅನೇಕ ಗ್ರಂಥಗಳನ್ನು ಬರೆದರು ಎಂದು ಲೇಖಕರು ಹೇಳಿದ್ದಾರೆ.

ಇವರ ಈ ಸೂತ್ರವನ್ನು ಅನುಸರಿಸಿದಾಗ ಈ ಭವ್ಯಾಮೃತದ ಕರ್ತೃಗಳು ಕಾವ್ಯದ ಕೊನೆಯಲ್ಲಿ 'ಸಿರಿದಾಗಿನಂಬಿ ನೇಮಿನಾ-ಶ್ವರ ಪಾದಾಂಬುಜಮ ನೆನೆದು ವಿನಮಿಸಿ ಪೇಳ್ದೆಂ'-[ಕಂ–೧೦೬] ಎಂದಿರುವುದು ಕಾರ್ಕಳದ ಹಿರಿಯಂಗಡಿ ನೇಮಿನಾಶ್ವರ ಸನ್ನಿಧಿಯಲ್ಲಿರ ಬಹುದೇ? ಎಂಬ ಅಭಿಪ್ರಾಯಕ್ಕೆ ಗೋಣಸು ಜೋಡುತ್ತದೆ. ಈ ವಿಚಾರ ಸಂಶೋ ಧನೆಯಿಂದ ಖಚಿತವಾದರೆ ಈ ಗ್ರಂಥ ಇಂದು ಕಾರ್ಕಳ ಮಠದ ದಿ। ಲಲಿತಕೀರ್ತಿ ಸ್ವಾಮಿಗಳ ೫೦ಲ ಕಲಶಾಭಿಷೇಕವು ಹಿರಿಯಂಗಡಿ ನೇಮಿನಾಶ್ವರಸ್ವಾಮಿಗೆ ಜರಗುವ ಕಾಲಕ್ಕೆ ಶಾಸ್ತ್ರದಾನವಾಗಿ ವಿತರಣೆಗೊಳ್ಳುತ್ತಿರುವುದು ಒಂದು ಯೋಗವೇ ಸೈ.

ದಿ। ಪೂಜ್ಯ ಶ್ರೀಗಳಿಗೆ ತುಳು ನಾಡಿನ ಕವಿಯಾದ ಚದುರ ಚಂದ್ರಮನ 'ಮದನಾರಿ ಗುಮ್ಮಟಸ್ವಾಮಿ ಚರಿತೆ' ಎಂಬ ಸಾಂಗತ್ಯ ಕಾವ್ಯವೆಂದರೆ ಬಹಳ ಅಚ್ಚು-ಮೆಚ್ಚು. ಅದಕ್ಕೆ ನಾನು ಕಂಡ ಕಾರಣಗಳು ಎರಡು. ಒಂದು: ಈ ಕಾವ್ಯದ ಏಕ-ಮೇವ ಪ್ರತಿ ಕಾರ್ಕಳದ ಜೈನ ಮಠದ ಸ್ವಾಮಿಗಳ ಅಧಿಪತ್ಯಕ್ಕೆ ಸೇರಿದ್ದು ಹಾಗೂ ಅದು ಅವರ ಕೃಪೆಯಿಂದ ಪ್ರತಿಯೆತ್ತಲ್ಪಟ್ಟು ಮದ್ರಾಸಿನ ಓರಿಯಂಟಲ್ ಲೈಬ್ರರಿಯ ವತಿಯಿಂದ ಬೆಳಕಿಗೆ ಬಂದುದು. ಎರಡು: ಕಾರ್ಕಳ ಭೈರವರಾಯನ ಕುಲಗುರು ಗಳಾದ ಲಲಿತಕೀರ್ತಿ ಸ್ವಾಮಿಗಳು ಕ್ರಿ. ಶ. 1645–46ರಲ್ಲಿ ವೈಭವದಿಂದ ನಡೆಸಿದ

ಮಹಾಮಸ್ತಕಾಭಿಷೇಕ ವಿಧಿಗಳ ವಿವರವಾದ ಬಣ್ಣನೆ ಕಾವ್ಯದ ಅಂತ್ಯದ ಎರಡು ಆಶ್ವಾಸಗಳಲ್ಲಿ ಚಿತ್ರಿತವಾದುದು.

ಇಂತು ಕಾರ್ಕಳದ ಇತಿಹಾಸ ಸಂಪುಟದ ಈ ಎರಡು ಕಾವ್ಯಗಳನ್ನು ದಿ। ಪರಮ ಪೂಜ್ಯ ಲಲಿತಕೀರ್ತಿ ಸ್ವಾಮಿಗಳವರ ಆತ್ಮಶಾಂತಿಗಾಗಿ ಜರಗುವ ಅಭಿಷೇಕದ ಕಾಲದಲ್ಲಿ ಆಯ್ದು, ಅಚ್ಚು ಹಾಕಿಸಿ ಶಾಸ್ತ್ರದಾನ ನೀಡಲಾಗುತ್ತಿದೆ. ಇವು ಶ್ರೀಗಳವರಿಗೆ ಪ್ರಿಯವಾದ ವಸ್ತು. ಅದಕ್ಕಾಗಿ 'ತ್ವದೀಯಂ ವಸ್ತು ಭೋ ಸ್ವಾಮಿನ್ ! ತುಭ್ಯಮೇವ ಸಮರ್ಪ್ಯತೇ' ಎಂದು ಬಿನ್ನವಿಸುತ್ತಾ ಅವರ ಪರೋಕ್ಷ ಸನ್ನಿಧಿಯಲ್ಲಿ ಇದನ್ನು ಭಕ್ತಿಯಿಂದ ಸಮರ್ಪಿಸುತ್ತಿದ್ದೇವೆ.

ಮಸ್ತಕಾಭಿಷೇಕದ ವಿವರವನ್ನು ಸಂಕಲಿಸಿದವರು ದಿ। ಜಿ. ಪಿ. ರಾಜರತ್ನಂ ಅವರು. 'ಕಾರ್ಕಳದ ಗೊಮ್ಮಟಸ್ವಾಮಿ' ಎಂಬ ಪುಸ್ತಕದಿಂದ ಎತ್ತಿ ಸಂಕ್ಷೇಪಿಸಿ ಇದನ್ನು ಬಳಸಿಕೊಂಡಿದ್ದೇವೆ. ಆದಕ್ಕಾಗಿ ಪ್ರಕಾಶಕರಾದ ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು ಇವರಿಗೆ ನಾವು ಋಣಿ.

ನಾಲ್ಕಾರು ದಿನಗಳ ಅಲ್ಪಕಾಲದಲ್ಲಿ ಗ್ರಂಥವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಕಾರ್ಕಳದ ಸಮತಾ ಮುದ್ರಣದ ಶ್ರೀ ಶಿಶುಪಾಲರಿಗೂ ಮೂಡುಬಿದ್ರಿಯ ಶ್ರೀ ಪದ್ಮಾಂಬಾ ಪ್ರಿಂಟರ್ಸ್‌ನ ಶ್ರೀ ಜಯವರ್ಮ ಇಂದ್ರರಿಗೂ ನನ್ನ ವಂದನೆಗಳು. ಪ್ರಾಧ್ಯಾಪಕ ಮಿತ್ರ ಶ್ರೀ ಗುಣಪಾಲ ಕಡಂಬ ಇವರ ತುಂಬು ಹೃದಯದ ನೆರವಿಗಾಗಿ ನಾನು ಋಣಿ.

ಮೂಡುಬಿದ್ರಿ,
ತಾ. 8-10-1987.

**ಪಂಡಿತ ಬಿ. ದೇವಕುಮಾರ ಜೈನ,**
ಸಂಪಾದಕ.



ಕಾರ್ಕಳ ಹಿರಿಯಂಗಡಿ ಹಿರಿ ಬಸದಿ
ಭಗವಾನ್ ಶ್ರೀ ೧೦೦೮ ನೇಮಿನಾಥ ಸ್ವಾಮಿ



ಕಾರ್ಕಳ ಗಿರಿಯಗ್ರದ ಅಧಿಪತಿ
ಭಗವಾನ್ ಶ್ರೀ ೧೦೦೮ ಬಾಹುಬಲಿ ಸ್ವಾಮಿ



ಕಾರ್ಕಳ ಶ್ರೀ ಮಠದ ಪೀಠಾಧಿಕಾರಿ
ಸ್ವರ್ಗೀಯ ಶ್ರೀಮದಭಿನವ ಲಲಿತಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ
ಮಹಾಸ್ವಾಮಿಗಳವರು

ಸ್ವರ್ಣಮಹೋತ್ಸವದ ಸಂದರ್ಭ
ಪೀಠಾಸೀನರಾದ ಪೂಜ್ಯ ಶ್ರೀಗಳವರು ಮತ್ತು ಹೋಬಳಿ ಗುರಿಕಾರರು.

ಸ್ವರ್ಣಮಹೋತ್ಸವ ಸಭೆಯಲ್ಲಿ
ಪಾಲುಗೊಂಡ ಮಠಾಧಿಪತಿಗಳು ಮತ್ತು ಪ್ರಮುಖ ಬಂಧುಗಳು

# ಜೀವನ ಪರಿಚಯ-

## ದಿ। ಸ್ವಸ್ತಿಶ್ರೀ ಲಲಿತಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಸ್ವಾಮಿಗಳವರು, ಕಾರ್ಕಳ.

ದಕ್ಷಿಣ ಭಾರತದ ಜೈನ ಪರಂಪರೆಯ ಕಲೆ-ಸಾಹಿತ್ಯ-ಸಂಸ್ಕೃತಿಗಳಿಗೆ ಆಶ್ರಯ ದಾತರು, ಸಂರಕ್ಷಕರು ಮಠಾಧಿಪತಿಗಳು ಇವೆಲ್ಲ ಪ್ರಾರಂಭದಲ್ಲಿ ನಿರ್ವಾಣ ಪೀಠಗಳು ರಾಜಕೀಯ ಮೇಲಾಟ, ಮೆರೆದಾಟದಿಂದಾಗಿ ಕಾವಿಬಟ್ಟೆ ಧರಿಸಿ ಪೀಠಾಧಿಕಾರಿಗಳಾಗ ಬೇಕಾದುದೊಂದು ಐತಿಹಾಸಿಕ ವಿಪರ್ಯಾಸ ಕ್ರಿ. ಶ. ೧೫೦೦ರಲ್ಲಿ ಭೈರವರಾಯ ಕಾರ್ಕಳ ಪೀಠಸ್ಥಾಪಕ, ಪನಸೋಗೆ, ವಂಗನಗರ, ಕಳಸಗಳು ಈ ಪೀಠದ ಅಧೀನ ಮಠಗಳು. ಭೈರವ ದೇವರಾಜ ಸೌಭಾಗ್ಯನೋಂಪಿ ನಿಮಿತ್ತ ಮೂಡುಬಿದರೆಯ ಚಾರುಕೀರ್ತಿಗಳಿಗೆ ಬಿನ್ನವಿಸಿಕೊಂಡನು. ಮೂಡುಬಿದ್ರೆ ಚೌಟರಸರಿಗೂ ನೋಂಪಿ ಇದ್ದ ಕಾರಣ ಚಾರುಕೀರ್ತಿಗಳು ಬರಲಿಲ್ಲ. ಅಲ್ಲಿಗಾಗಮಿಸಿದ್ದ ದಿಗಂಬರ ಮುನಿಯೊಬ್ಬ ರನ್ನು ಕಾರ್ಕಳಕ್ಕೆ ಕಳುಹಿಸಿಕೊಟ್ಟರು. ಇದರಿಂದ ಅತೃಪ್ತನಾದ ಭೈರವದೇವ ಬಂದ ಮುನಿಗಳಿಗೇ ಪಟ್ಟಕಟ್ಟಿ ಮೂಲ ಪನಸೋಗೆ ಮಠದ ಬಿರುದನ್ನೇ ಇತ್ತು ಧಾರ್ಮಿಕ ಕಾರ್ಯಗಳನ್ನು ನಡೆಸಿಕೊಂಡು ಬಂದನು. ಕಾರ್ಕಳ ಪೀಠಕ್ಕೆ ಇಂದು 483 ವರ್ಷ ಗಳು ತುಂಬಿದುವು.

ದ. ಕ. ಜಿಲ್ಲೆಯ ಬಂಟವಾಳ ತಾಲೂಕು ಎಲಿಯ ಮಾಗಣೆ ನಡಕೋಡು ಗ್ರಾಮದ ಎಣ್ಮೆಜೆ ಮನೆಯಲ್ಲಿ 9-6-1903ರಂದು ಜನನವಾಯ್ತು. ಎಲಿಮೊಗರು ಗುತ್ತು (ಪಟೇಲ್ ಮನೆ) ಬಂಟ್ವಾಳ ತಾಲೂಕು ಅಜ್ಜಿಬೆಟ್ಟು ಮಾಗಣೆಯ ದೇಜಣ್ಣ ಪೂವಣಿಯವರು ತಂದೆ. ಬಂಟ್ವಾಳ ಬಾಳೇಶ್ವರ ಪಂಜಿಕಲ್ಲು ಧರ್ಮಣ ಶೆಟ್ರ ಪುತ್ರಿ ಶ್ರೀಮತಿಯವರು ತಾಯಿ. ಹುಟ್ಟಿದ 16ನೇ ದಿನದಂದು ಮಗುವಿಗೆ ಬ್ರಹ್ಮಯ್ಯ ನೆಂದು ನಾಮಕರಣ ಮಾಡಿದರು. ಎಲಿಯ ಮಾಗಣೆಯ ಸಿದ್ಧಕಟ್ಟೆ ಶಾಲೆಯಲ್ಲಿ ನಾಲ್ಕನೆ ತರಗತಿಯ ತನಕ ವಿದ್ಯಾಭ್ಯಾಸವಾಯ್ತು. ಶಾಂತಿರಾಜ ಮಾಸ್ತರರು ಮೊದಲು ವಿದ್ಯಾಗುರು. 1914ರಲ್ಲಿ ಶಾಲೆ ತೊರೆದು 1921ರ ತನಕ ಮನೆಯಲ್ಲಿ ಗೃಹಕೃತ್ಯದಲ್ಲಿ ಸಹಯೋಗ ನೀಡಿಕೊಂಡಿರಬೇಕಾಯ್ತು. ಒಮ್ಮಿಂದೊಮ್ಮೆಲೆ ಏಕೋ ಏನೋ ಕಲಿಯಬೇಕೆಂಬಾಸೆ. ಏಕಾಏಕಿ-ಏನೂ ಇಲ್ಲದೆ : ಶ್ರವಣಬೆಳ್ಗೊಳದತ್ತ ಪಯಣ ವಿದ್ವದ್ವರದೌರ್ಬಲ ಜಿನದಾಸ ಶಾಸ್ತ್ರಿಗಳಲ್ಲಿ ಆಶ್ರಯ. ನಾಲ್ಕು ವರ್ಷ ಸಂಸ್ಕೃತ ವಿದ್ಯಾಭ್ಯಾಸ. ಮತ್ತೆ ಪುನಃ ಊರತ್ತ ಎಲಿಯಕ್ಕೆ. ಆದರೂ ಕಲಿಕೆಯ ಒಲವು ನಿಲ್ಲಲಿಲ್ಲ. ಮೂಡಬಿದ್ರೆ ಲೋಕನಾಥ ಶಾಸ್ತ್ರಿಗಳಲ್ಲಿ ಎರಡು ವರ್ಷಗಳ ಜೈನ ದರ್ಶನಾಭ್ಯಾಸ. ಅನಂತರ ಸ್ವಸ್ತಿ ಶ್ರೀ ನೇಮಿಸಾಗರ ವರ್ಣಿಜಿಯವರಲ್ಲಿ ಸೇವಾ ನಿರತರಾದರು. ಕೆಲ ವರ್ಷ ಅಂತೆಯೇ ವಿಹಾರದಲ್ಲಿದ್ದು ಕೊನೆಗೆ ನಾಗಪುರದಲ್ಲಿ ಬಿ. ಶಾಂತಿರಾಜಶಾಸ್ತ್ರಿಗಳಲ್ಲಿ ವಿದ್ಯಾಧ್ಯಯನ. ಅನಂತರ 1932ರಲ್ಲಿ ಊರಿಗೇ ಪಯಣ.

1933ರಲ್ಲಿ ಕಾರ್ಕಳ ಶ್ರೀ ಗುರುಪೀಠಕ್ಕೆ ಪಟ್ಟಾಭಿಷಿಕ್ತನಾಗಬೇಕೆಂದು, ನೇಮಿಸಾಗರ ವರ್ಣಿಗಳ ಒತ್ತಾಯ ಅತ್ತ ಶಂಕರಪಡಿವಾಳರು ಕುಕ್ಕುಂದೂರು ಪೂವಣಿ ಮುದ್ದರಸ ಕುಮಾರಯ್ಯ ಶಾಸ್ತ್ರಿಗಳು, ಕಲ್ಲಿಗ ಪೂವಣಿ ಹೆಗ್ಡೆಯವರು ಅಂತೆಯೇ ಅನೇಕ ಪ್ರತಿಷ್ಠಿತ ಸಮಾಜ ಬಾಂಧವರೂ ಒಗ್ಗಟ್ಟಾದರು, ತಾರೀಕು 28-5-1933ರಂದು ಕಾರ್ಕಳ ಶ್ರೀ ಗುರುಪೀಠದಲ್ಲಿ ಪಟ್ಟಾಭಿಷಿಕ್ತರಾದರು. ಶ್ರೀ ಬ್ರಹ್ಮಯ್ಯ ಸ್ವಸ್ತಿ ಶ್ರೀ ಲಲಿತಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯರಾದರು.

ಆಗ ಶ್ರೀಮಠ ಸಂಪೂರ್ಣ ಸಂಕಷ್ಟಸ್ಥಿತಿಯಲ್ಲಿತ್ತು. ಬಾವಿಯಿರಲಿಲ್ಲ, ಶ್ರೀ ಚಂದ್ರನಾಥ ಬಸದಿಯಿರಲಿಲ್ಲ, ಮುಡಿ ಅಕ್ಕಿಗೆ ಎರಡುವರೆ ರೂಪಾಯಿ ಮೂಲ ಗೇಣಿಯಿಂದ ಬರುವ ಆದಾಯ ಅತ್ಯಲ್ಪ. ಅದರಲ್ಲಿ ಭೂ ತೀರ್ವೆ ರೂ. 300/- ಸಲ್ಲಬೇಕು. ಶ್ರೀ ಮಠದ ಸುತ್ತಮುತ್ತ ಇರುವ ಭೂಮಿಯಲ್ಲಿ ಉತ್ಪಾದನೆಯಿಲ್ಲ. ಈಯೆಲ್ಲ ಸಂದಿಗ್ಧ ಕಾಲದಲ್ಲಿ ಒಂದೊಂದೇ ಸಿಕ್ಕುಗಳನ್ನು ಬಿಡಿಸುತ್ತ ಹೋರಾಡುತ್ತಾ ಮುಂದೆ ಬಂದರು. 1947ರಲ್ಲಿ ಸ್ವಾತಂತ್ರ್ಯ ಬಂತು. ಪಂಚವಾರ್ಷಿಕ ಯೋಜನೆಗಳಲ್ಲಿ ನವನೂತನ ಕ್ರಾಂತಿಗಳು ಪ್ರಾರಂಭವಾದುವು 1964ರಿಂದ ಭೂ-ಮಸೂದೆಯ ಅಧ್ಯಾಯ ಆರಂಭವಾಯ್ತು. ಪರಿಹಾರ ದೊರೆಯುವಂತಾಯ್ತು.

ರಾಜಾಶ್ರಯದಿಂದ ಮೆರೆಯುತ್ತ ಏರು-ಪೇರುಗಳಲ್ಲಿ ಬಾಳುತ್ತಲಿದ್ದ ಶ್ರೀ ಗುರುಪೀಠದಲ್ಲಿ ಐದು ದಶಕಗಳ-ಸುವರ್ಣಮಹೋತ್ಸವವನ್ನು ಆಚರಿಸಿ ತನ್ನ ಎಂಭತ್ತ ನಾಲ್ಕನೆಯ ಪ್ರಾಯದಲ್ಲಿ ಪರಂಧಾಮವನ್ನು ಪ್ರಾಪ್ತರಾದ ನಮ್ಮ ಪರಮ ಪೂಜ್ಯ ಹಿರಿಯ ಸ್ವಸ್ತಿ ಶ್ರೀ ಲಲಿತಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಸ್ವಾಮಿಗಳ ದಿವ್ಯಾತ್ಮನಿಗೆ ಸ್ವರ್ಗ ಮೋಕ್ಷಾದಿಗಳು ಪ್ರಾಪ್ತವಾಗಲೆಂದು ಶ್ರೀ ದೇವರಲ್ಲಿ ಪ್ರಾರ್ಥಿಸುತ್ತೇವೆ.

॥ ಭದ್ರಂ—ಶುಭಂ—ಮಂಗಲಂ ॥

# ಭವ್ಯಾಮೃತ

ಶ್ರೀಮನ್ ಮುಮುಕ್ಷುವಂದ್ಯಂ ।
ಕಾಮಾಂತಕ ಕಾಲವಿಜಯ ಗುಣಗಣನಿಳಯಂ ॥
ಸ್ವಾಮಿ ಪರಮಾತ್ಮ ದೇವಂ ।
ಪ್ರೇಮದಿ ಪಾಲಿಸುಗೆ ನಿತ್ಯ ನಿರಘನಜಸ್ರಂ ॥ ೧ ॥

ಅನಂತಜ್ಞಾನ ಮೊದಲಾದ ಅಂತರಂಗ ಸಂಪತ್ತಿನಿಂದಲೂ ಸಮವಶರಣ, ಸಿಂಹಾಸನ. ಛತ್ರ, ಚಾಮರ ಮೊದಲಾದ ಬಹಿರಂಗ ಸಂಪತ್ತಿನಿಂದಲೂ ಶೋಭಿತನಾದ. ಮೋಕ್ಷಾಭಿಲಾಷಿಗಳಿಂದ ವಂದಿತನಾದ, ಕಾಮ, ಕ್ರೋಧ. ಹುಟ್ಟು ಮುಪ್ಪು ಮರಣ ಮೊದಲಾದ ದೋಷರಹಿತನಾದ ಹಾಗೂ ಸಮ್ಯಕ್ತ್ವವೇ ಮೊದಲಾದ ಗುಣಗಳಿಗೆ ಒಡೆಯನಾದ ಪರಮಾತ್ಮನು ಸರ್ವಕಾಲದಲ್ಲಿಯೂ ಪ್ರೇಮದಿಂದ ಶುಭ ಪರಿಣಾಮವನ್ನು ನಮಗೆಲ್ಲರಿಗೂ ದಯಪಾಲಿಸಲಿ.

ಜೀವನು ತನ್ನೊಳಗಿರುತಿಹ ।
ಪಾವನ ಪರಮಾತ್ಮಗುಣನು ತನ್ನಿಂದಲೆ ತಾಂ ॥
ಭಾವಿಸದೆ ಭವಸಮುದ್ರದೊ – ।
ಳಾವಾಗಲು ತೊಳಲುತಿಹನು ಕರ್ಮದ ವಶದಿಂ ॥ ೨ ॥

ಎಲೈ ಭವ್ಯನೆ! ಜೀವನು ತನ್ನ ಈ ಶರೀರದಲ್ಲಿದ್ದು ಪರಮಪವಿತ್ರನಾದ ಪರಮಾತ್ಮನಾಗಿದ್ದಾನೆ. ಆದರೆ ಆ ಗುಣಗಳನ್ನು ತಾನು ತಿಳಿಯದೆ, ಯಾವಾಗಲೂ ಜ್ಞಾನಾವರಣವೇ ಮೊದಲಾದ ಕರ್ಮಗಳಿಗೆ ವಶನಾಗಿ ಈ ಸಂಸಾರವೆಂಬ ಸಮುದ್ರದಲ್ಲಿ ದುಃಖಪಡುತ್ತಿರುವನು.

ಇದಚೇತನಮುಂ ಪುದ್ಗಲ – ।
ಮದು ಚೇತನಮೆಂದು ಜೀವನೆರಡರ ತೆರನಂ ॥
ಹೃದಯದೊಳು ನಿಚ್ಚ ನಿಚ್ಚಂ ।
ಪದಪಿಂ ಭಾವಿಸುವ ಜೀವ ತೊಲಗುವ ಭವದಿಂ ॥ ೩ ॥

ಎಲೈ ಭವ್ಯನೇ! ಈ ಶರೀರವು ಜಡವಾದ ಪುದ್ಗಲವು; ಈ ಜೀವನು ಜ್ಞಾನಮಯನಾದವನು, ಎಂಬ ಈ ಎರಡರ ಭೇದವನ್ನು ತಿಳಿದು ಪ್ರತಿನಿತ್ಯವೂ ಹೃದಯದಲ್ಲಿ ಭಾವಿಸುವ ಜೀವನು ಈ ದುಃಖದಾಯಕವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದುವನು.

ರಾಗಾದಿರಹಿತ ಜಿನಕಥಿ - ।
ತಾಗನುದೋಜೆಯೊಳು ಮುನಿಗಳುಸುರುವ ತೆರದಿಂ ॥
ಬೇಗದೊಳು ತಿಳಿದೊಡವ ಭವ- ।
ಸಾಗರವಂ ದಾಂಟಿ ಪರಮ ಸುಖಿಯಾಗಿರ್ಪಂ ॥ ೪ ॥

ಯಾವನು ರಾಗ, ದ್ವೇಷ ಮೊದಲಾದ ದೋಷಗಳಿಂದ ರಹಿತವಾದ ಹಾಗೂ ಜಿನೇಶ್ವರರು ಹೇಳಿದಂತಹ ಶಾಸ್ತ್ರವನ್ನು ಮುನಿಗಳು ಉಪದೇಶಿಸಿದಂತೆ ತಿಳಿದು ಆಚರಿಸುವನೋ ಅವನು ಈ ಅಪಾರವಾದ ಸಂಸಾರಸಾಗರವನ್ನು ದಾಟಿ ಸುಖಿಯಾಗುವನು.

ಸಕಲ ಗುಣನಿಧಿ ನಿಜಾತ್ಮಂ ।
ಸಕಲ ಶ್ರುತಗಳೊಳು ಸಾರವೆಂಬುದ ತಿಳಿದುಂ ॥
ಪ್ರಕಟಿಸುವ ಭವ್ಯ ಜೀವನು ।
ಸಕಲ ಸುಖಕ್ಕೊಡೆಯನಾಗಿ ವರ್ತಿಸುತಿಹನುಂ ॥ ೫ ॥

ಈ ತನ್ನ ಶರೀರದಲ್ಲಿರತಕ್ಕ ಆತ್ಮನು ಸಮ್ಯಕ್ತ್ವವೇ ಮೊದಲಾದ ಗುಣಗಳಿಗೆ ನಿಧಿಯಾಗಿರುವನು ಮತ್ತು ಸಕಲ ಶಾಸ್ತ್ರಗಳ ಮೂಲಕ ಆತ್ಮನು ಶ್ರೇಷ್ಠನಾದವನು ಎಂದು ತಿಳಿದು ಸನ್ಮಾರ್ಗದಲ್ಲಿ ನಡೆಯುವ ಜೀವನು ಸ್ವರ್ಗ, ಮೋಕ್ಷಾದಿ ಸಕಲ ಸುಖಗಳಿಗೆ ಒಡೆಯನಾಗುವನು.

ಆ ಸುಖವ ಬಯಸಿ ರುಚಿಯಿಂ-।
ದೀ ಸಂಸಾರವನು ಕಂಡು ಭಯಗೊಂಬುವರುಂ ॥
ಲೇಸಾಗಿ ಕಾಯ-ಭೋಗಗ- ।
ಳಾಸೆಯಲ್ಲವನು ಕಳೆಯಲುದ್ಯೋಗಿಪುದುಂ ॥ ೬ ॥

ಭವ್ಯಜೀವರು, ಆ ಮೋಕ್ಷಸುಖವನ್ನು ಅಪೇಕ್ಷಿಸಿ ದೃಢವಾದ ವಿಶ್ವಾಸ (ಸಮ್ಯಗ್ದರ್ಶನ) ದಿಂದ ಈ ದುಃಖಮಯವಾದ ಸಂಸಾರವನ್ನು ನೋಡಿ ಅತ್ಯಂತ ಭಯಪಡುತ್ತಾರೆ ಆದುದರಿಂದ ಶರೀರ ಹಾಗೂ ಭೋಗಾದಿಗಳು ಸ್ಥಿರವಲ್ಲ. ಅವುಗಳ ಆಸೆಯನ್ನು ತೊರೆಯಲು ಪ್ರಯತ್ನಿಸತಕ್ಕದ್ದು.

ಕಾರಣ ಕಾರ್ಯಂಗಳೆರಡಂ ।
ಮೀರದೆ ಸಕಲಾಗಮಂಗಳ ಕೇಳನವರತಂ ॥
ಸಾರವೆನಿಪಾತ್ಮತತ್ತ್ವವ ।
ನಾರಾರಿಯ ಮತದೊಳಿರ್ದು ಭಾವಿಸು ನಿತ್ಯಂ ॥ ೭ ॥

ಈ ಸಂಸಾರಕ್ಕೆ ಸಂಬಂಧವಾದ ಕಾರ್ಯ-ಕಾರಣಗಳನ್ನು ತಿಳಿದು, ಯಾವಾಗಲೂ ಶಾಸ್ತ್ರಗಳನ್ನು ಕೇಳುತ್ತ. ಪರಮೋತ್ಕೃಷ್ಟವಾದ ಪರಮಾತ್ಮ ತತ್ತ್ವವನ್ನು ಜಿನಧರ್ಮದಲ್ಲಿದ್ದು ಸದಾ ಭಾವಿಸು.

ಒಂದೇ ವಸ್ತುವು ನಿಚ್ಚಂ ।
ಸಂದೇಹಂ ಬಡದೆ ಮತ್ತನಾಗದೆ ನಾನಾ ॥
ಚಂದದ ಮಾತಂ ಕೇಳದೆ-।
ಯೊಂದೇ ಬುದ್ಧಿಯುಲಿ ನೆನೆವ ಮನುಜಗೆ ಮೋಕ್ಷಂ ॥ ೮ ॥

ಎಲೈ ಭವ್ಯನೇ! ನೀನು ಸಂದೇಹರಹಿತನಾಗಿ ಮತ್ತು ಜ್ಞಾನಮದ ಮೊದಲಾದ ಗರ್ವಗಳನ್ನು ತೊರೆದು, ನಾನಾ ರೀತಿಯ ಮನೋರಂಜಕವಾದ ಮಾತುಗಳಿಗೆ ಮರುಳಾಗದೆ ಏಕಮನಸ್ಸಿನಿಂದ ಪರಮಾತ್ಮನು ಒಬ್ಬನೇ, ಅವನು ನಿತ್ಯನು, ಸತ್ಯನು ಎಂದು ಭಾವಿಸಿದೆಯಾದರೆ ನಿನಗೆ ನಿಜವಾಗಿಯೂ ಮೋಕ್ಷ ಪ್ರಾಪ್ತಿಯಾಗುವುದು.

ಒಂದೇ ವಸ್ತುವದಾವುದು-।
ಮೆಂದೊಡೆಯುದ ಪೇಳ್ವೆ ಭವ್ಯ! ಕೇಳ್ಳೈ ಮುದದಿಂ ॥
ಎಂದೆಂದಿಗೂ ಬಿಡಬೇಡಾ- ।
ನಂದಮಯಾತ್ಮಸ್ವರೂಪನರಿವುದು ನಿಜದಿಂ ॥ ೯ ॥

ಎಲೈ ಭವ್ಯನೇ! ಅಂತಹ ಆ ಒಂದೇ ವಸ್ತು ಯಾವುದು ? ಎಂದರೆ, ಈ ತನ್ನ ಹೃದಯದಲ್ಲಿರುವ ಆನಂದಮಯನಾದ ಪರಮಾತ್ಮನು. ಆ ಪರಮಾತ್ಮನ ನಿಜ ಸ್ವರೂಪವನ್ನು ತಿಳಿದು, ಎಂತಹ ಕಷ್ಟಗಳು ಪ್ರಾಪ್ತವಾದರೂ ಅವನ ಸ್ಮರಣೆಯನ್ನು ಬಿಡಬೇಡ.

ಪರಮಾತ್ಮ ನಿತ್ಯರೂಪನು ।
ತೋರುವೆ ಶಾಸ್ತ್ರಂಗಳಿಂದಲೆನ್ನುವನೆಗ್ಗಂ ॥
ಪರಿಕಿಸಲಕ್ಕುಮೆ ದೀಪದಿ ।
ವರ ಜಂಬೂದ್ವೀಪದಿರವ ಕುರುಡಂ ಪೇಳ್ಕೆ ॥ ೧೦ ॥

ಪರಮಾತ್ಮನು ನಿತ್ಯನಾದವನು. ಅವನನ್ನು ಶಾಸ್ತ್ರದ ಮೂಲಕ ತೋರಿಸುವೆನೆಂದು ಹೇಳುವವನು ಹೆಡ್ಡ. ಕುರುಡನು ಜಂಬೂದ್ವೀಪದ ವಿಸ್ತಾರವನ್ನು ಕೈದೀಪದಿಂದ ತೋರಿಸುವೆನೆಂದರೆ ಸಾಧ್ಯವೇ? ಹಾಗೆಯೇ ಈತನೂ ಪರಮಾತ್ಮನ ನಿಜಸ್ವರೂಪವನ್ನು ಅರಿಯಲಾರನು.

ಅದು ಕಾರಣದಿಂದ ತನ್ನೊಳ – ।
ಗುದಯಿಸುವತಿಶಯ ವಿಶುದ್ಧ ಪರಿಣಾಮುವನೇ ॥
ಸದಮಲ ಭಾವದೊಳನುದಿನ - ।
ಮದನೇ ಚಿಂತಿಸಿದೊಡಕ್ಕುಮೆಲ್ಲಾ ಶಾಸ್ತ್ರಂ ॥ ೧೧ ॥

ಎಲೈ ಭವ್ಯನೆ! ಆ ಕಾರಣದಿಂದ ತನ್ನ ಹೃದಯದಲ್ಲಿ ಉಂಟಾಗುವ ಅತ್ಯಂತ ವಿಶುದ್ಧವಾದ ಪರಿಣಾಮದಿಂದ ಯಾವಾಗಲೂ ಆ ಪರಮಾತ್ಮನ ಸ್ವರೂಪವನ್ನು ಚಿಂತಿಸಿದರೆ ಸಕಲ ಶಾಸ್ತ್ರಗಳನ್ನೂ ತಿಳಿದಂತೆ ಆಗುವುದು.

ಜೀವನ ನಿಜಗುಣವೇನೆನೆ ।
ಕೇವಲ - ದೃಗ್ಬೋಧ - ವೀರ್ಯ - ಸುಖಗಳುನುದರಿಂ- ।
ದಾವಾವ ಶಾಸ್ತ್ರ ಕೇಳಲು ।
ಬಾವಿಯೊಳುರುಪುಂಜಿನುದಕ ಬಿದ್ದಂತಕ್ಕುಂ ॥ ೧೨ ॥

ಎಲೈ ಭವ್ಯನೆ! ಜೀವನ ನಿಜವಾದ ಗುಣಗಳಾವುವೆಂದರೆ ಅನಂತಜ್ಞಾನ, ಅನಂತ ದರ್ಶನ ಅನಂತಶಕ್ತಿ ಮತ್ತು ಅನಂತಸುಖಗಳು. ಆದುದರಿಂದ ಯಾವ ಶಾಸ್ತ್ರ ವನ್ನು ಕೇಳಿದರೂ ನೀರು ತುಂಬಿದ ಬಾವಿಗೆ ಹಿಮದ ಹನಿ ಬಿದ್ದರೆ ಹೇಗೆ ಅದು ನೀರಿಗೆ ಸೇರಿಹೋಗುವುದೋ ಅದರಂತೆ ಶಾಸ್ತ್ರ ಓದುವುದಕ್ಕಿಂತ ಆತ್ಮನ ಗುಣ ಗಳನ್ನು ಚಿಂತಿಸುವುದು ಉತ್ತಮ.

ತಾಂ ತನ್ನ ನಿಜವ ನೋಡದೆ ।
ಮಾತಿನೊಳೇ ನುಡಿದುಮೋದುವವರಂ ನಿಂದಿಸಿ ॥
ನೀತಿಯು ನೋಡದ ಮನುಜಂ ।
ಭೂತಳದೊಳಗುಭಯಭ್ರಷ್ಟ ತಾನೇಯಕ್ಕುಂ ॥ ೧೩ ॥

ಈ ಪ್ರಕಾರವಾಗಿ ತನ್ನ ಆತ್ಮಸ್ವರೂಪವನ್ನು ತಿಳಿಯದೆ, ಶಾಸ್ತ್ರಾಭ್ಯಾಸ ಮಾಡುವವ ರನ್ನು ನಿಂದಿಸುತ್ತಾ, ನೀತಿಯನ್ನೂ ಅರಿಯದವನಾಗಿ, ಇಹಲೋಕ ಹಾಗೂ ಪರಲೋಕ ಸಂಬಂಧವಾದ ಸುಖದಿಂದ ವಂಚಿತನಾಗುವನು.

ಸರಡುಂ ಬರಡುಂ ನುಡಿ ಳ ।
ಪರಿಹರಿಸಿ ನಿಜಾತ್ಮಗುಣವ ಪೇರ್ಚಿಸು ಪದಪಿಂ-॥
ದೆರಡೆರಡು ಮಾತಿನಿಂದಲೆ ।
ನಿರಂತರಂ ತತ್ತ್ವದಲ್ಲಿಯಭ್ಯಾಸಿಸು ನೀಂ ॥ ೧೪ ॥

ಎಲೈ ಭವ್ಯನೇ! ಆದುದರಿಂದ ಪೊಳ್ಳಾದ ಆಡಂಬರದ ಮಾತುಗಳನ್ನು ಬಿಟ್ಟುಬಿಡು. ತನ್ನ ಆತ್ಮಸ್ವರೂಪ ಸಂಬಂಧವಾದ ಭಾವನೆಯ ಎರಡೆರಡು ವಚನಗಳನ್ನು ಯಾವಾಗಲೂ ಚೆನ್ನಾಗಿ ಅಭ್ಯಾಸಿಸು.

ನಾನಾಜೀವಗಳನಿತವು ।
ನಾನಾಕರ್ಮಂಗಳಲ್ಲಿ ಮರೆಸಿದ ಪರಿಯಿಂ ॥
ಜ್ಞಾನಗಳನೇಕ ಭೇದವು ।
ಮಾತೇಂ ವ್ಯವಹಾರನಯದ ಮಾರ್ಗದೊಳಕ್ಕುಂ ॥ ೧೫ ॥

ಎಲೈ ಭವ್ಯನೇ! ವ್ಯವಹಾರ ನಯ (ದೃಷ್ಟಿ) ದಿಂದ ಅನೇಕ ವಿಧವಾದ ಜೀವರು ಅನೇಕ ಪ್ರಕಾರವಾದ ಕರ್ಮಗಳಿಗೆ ವಶೀಭೂತರಾಗಿರುವುದರಿಂದ ಅವರ ಜ್ಞಾನ ಗಳಲ್ಲಿಯೂ ಅನೇಕ ಭೇದಗಳಾಗುತ್ತವೆ.

ಶುದ್ಧನಯದಿಂದ ಜಗದೊಳ-।
ಗಿದ್ದಂತಹ ಜೀವರಾಶಿಯೆಲ್ಲಾ ನಿಚ್ಚಂ ॥
ಶುದ್ಧಮೆಯುಪ್ಪುದುಮದರಿಂ।
ಶುದ್ಧಾತ್ಮನ ಭಾವನೆಯನು ಬಿಡದಿರು ಜೀವಾ! ॥ ೧೬ ॥

ಎಲೈ ಭವ್ಯನೆ! ಪಾರಮಾರ್ಥಿಕ ದೃಷ್ಟಿಯಿಂದ ಈ ಲೋಕದಲ್ಲಿ ಇರುವ ಜೀವರಾಶಿಯೆಲ್ಲವೂ ನಿತ್ಯವಾದದ್ದು ಮತ್ತು ಶುದ್ಧವಾದದ್ದು. ಅಂದರೆ ಕೇವಲ ದೇಹಗಳು ಬದಲಾವಣೆಯಾಗುವುದಲ್ಲದೆ, ಈ ಚೈತನ್ಯನಾದ ಆತ್ಮನು ಶಾಶ್ವತನಾಗಿ ಇರುವನು. ಆದುದರಿಂದ ನೀನು ಎಂದೂ ಪರಿಶುದ್ಧನಾದ ತನ್ನ ಪರಮಾತ್ಮನ ಚಿಂತನೆಯನ್ನು ಬಿಡಬೇಡ.

ದಾರಿದ್ರ್ಯಹತ ಮನುಷ್ಯಗೆ।
ದಾರಿಯ ನಡೆವಲ್ಲಿ ಕಾಣೆ ಪೊನ್ನ ಕಡಾರಂ ॥
ತೋರದ ತೆರದಿಂಪಸ್ಯಗೆ।
ಸಾರಾತ್ಮನ ಗೋಪ್ಯದಲ್ಲಿ ಭಾವಿಸು ಭವ್ಯಾ! ॥ ೧೭ ॥

ಎಲೈ ಭವ್ಯನೆ! ಲೋಕದಲ್ಲಿ ದರಿದ್ರನಾದ ಮನುಷ್ಯನಿಗೆ ದಾರಿಯಲ್ಲಿ ಬಿದ್ದಿದ್ದ ಚಿನ್ನದ ಕೊಪ್ಪರಿಗೆಯೂ ಕಾಣಿಸಲಾರದು. ಅದರಂತೆ ಆತ್ಮಜ್ಞಾನರಹಿತನಾದ ಸಂಸಾರಿ ಜೀವನಿಗೆ ಪರಮಾತ್ಮನ ಜ್ಞಾನವು ಉಂಟಾಗಲಾರದು. ಆದುದರಿಂದ ನೀನು ಸಾರವಾದ ತನ್ನ ಪರಮಾತ್ಮನ ಸ್ವರೂಪವನ್ನು ಏಕಾಂತದಲ್ಲಿ ಚಿಂತಿಸು.

ಹಿಂದಕ್ಕನೇಕ ಭವದೊಳು।
ದಂದುಗಕೊಳಗಾಗಿ ನೊಂದು ಬಳಲಿದ ಭವ್ಯಂ ॥
ಇಂದು ನಿಜಗಂಡು ಪರಮಾ-।
ನಂದದ ಕಡಲೊಳಗೆ ಮುಳುಗಿ ನಲಿಯುತ್ತಿರ್ಕುಂ ॥ ೧೮ ॥

ಎಲೈ ಭವ್ಯನೆ! ಹಿಂದಕ್ಕೆ ಅನೇಕ ಭವಗಳಲ್ಲಿ ನಾನಾವಿಧವಾದ ಕಷ್ಟಗಳನ್ನು ಅನುಭವಿಸಿ ಬಹಳ ಬಳಲಿರುವಿ. ಆದುದರಿಂದ ಈಗ ಪರಮಾತ್ಮಚಿಂತನೆಯೆಂಬ ಆನಂದಮಯವಾದ ಸಮುದ್ರದಲ್ಲಿ ಮುಳುಗಿ ಸಂತುಷ್ಟನಾಗು.

ಜಡ ಕುಣಿದು ಬೇಡಿಕೊಂಡೊಂ-।
ದಡಕೆಯನು ಪಡೆಯದಂತೆ ಸಂಸೃತಿಯಾಟಂ ॥
ಒಡಲಂ ದಂಡಿಸಿ ನಿತ್ಯಂ।
ಜಡತೆಯ ಬಿಟ್ಟಾತ ಗುಣವ ಪೆರ್ಚಿಸುತಿಹನುಂ ॥ ೧೯ ॥

ಎಲೈ ಭವ್ಯನೇ! ಲೋಕದಲ್ಲಿ ಮೂರ್ಖನು ಕುಣಿದಾಡಿ ಬೇಡಿಕೊಂಡರೂ ಅಡಕೆಯಷ್ಟು ಆಹಾರವನ್ನು ಹೊಂದಲಾರನು. ಅದೇ ರೀತಿಯಲ್ಲಿ ಸಂಸಾರದಲ್ಲಿ ಎಷ್ಟು ಭ್ರಮಿಸಿದರೂ ಏನೂ ಪ್ರಯೋಜನವಾಗಲಾರದು. ಆದುದರಿಂದ ಜಿತೇಂದ್ರಿಯನಾದ ಮತ್ತು ಸದಾ ಆಲಸ್ಯ ರಹಿತನಾದ ಮನುಷ್ಯನು ಸರ್ವೋತ್ಕೃಷ್ಟವಾದ ಗುಣಗಳನ್ನು ಹೊಂದುವನು.

ಜ್ಞಾನಿಗಳ ಚಿತ್ತವರ್ತನೆ - ।
ಗಾನಂದಾಮೃತವ ತೋರುವಾತ್ಮನ ರೂಪಂ ॥
ತಾನಪ್ಪನದರ ಪೆರ್ಚಿಂ ।
ಮಾನವ ಜನ್ಮಕ್ಕೆಯುಪಮೆ ಲೋಕದೊಳಿಲ್ಲಂ ॥ ೨೦ ॥

ಎಲೈ ಭವ್ಯನೇ ! ಸುಜ್ಞಾನಿಗಳಿಗೆ ತನ್ನ ಪರಮಾತ್ಮಭಾವನೆಯು ಅತ್ಯಂತ ಆನಂದ ವನ್ನುಂಟು ಮಾಡುತ್ತದೆ. ಆ ಪ್ರಕಾರವಾದ ಪರಮಾತ್ಮಭಾವನೆಯನ್ನು ನಿತ್ಯವೂ ಚಿಂತಿಸುತ್ತಿರುವ ಮನುಷ್ಯ ಜನ್ಮಕ್ಕೆ ಸರಿಯಾದ ಉಪಮೆಯು ಲೋಕದಲ್ಲಿಲ್ಲ. ಅಂದರೆ ತನ್ನ ಪರಮಾತ್ಮಭಾವನೆಯನ್ನು ಮಾಡತಕ್ಕ ಮಾನವ ಜನ್ಮ ಶ್ರೇಷ್ಠ ವಾದುದು ಎಂದರ್ಥ.

ಮನುಜ ತಿಳಿದಾಗಲಲ್ಲಿಯೆ ।
ಧನ ಧಾನ್ಯಾದ್ಯಖಿಲದಾಶೆಯನು ಬಿಡು ವನಿತಾ - ।
ಜನಸಂಬಂಧವ ವರ್ಜಿಸಿ - ।
ಯನವರತ ನಿಜಾತ್ಮನನ್ನು ಭಾವಿಸು ನಿತ್ಯಂ ॥ ೨೧ ॥

ಎಲೈ ಮನುಜನೇ! ನೀನು ತನ್ನ ಪರಮಾತ್ಮಸ್ವರೂಪವನ್ನು ತಿಳಿದು ಯಾವಾಗಲೂ ಪರಿಭಾವಿಸು. ಧನ-ಧಾನ್ಯ, ಸ್ತ್ರೀ ಮೊದಲಾದ ಎಲ್ಲಾ ಪರಿಗ್ರಹದಾಸೆಯನ್ನು ಬಿಟ್ಟುಬಿಡು. ಸದಾ ನಿಜಾತ್ಮನನ್ನು ಭಾವಿಸು.

ಲೋಕದೊಳಗುಳ್ಳ ಸಂಸೃತಿ ।
ಲೌಕಿಕದಿಂ ನಡೆವ ನಡತೆಯಂ ಪೊರ್ದದೆ ತಾಂ ॥
ಏಕಾಂಗಿಯಾಗಿ ಸಮತೆಯು ।
ಕೈಕೊಂಡು ನಿಜಾತ್ಮನಿರವ ಕಾಣ್ಬುದು ಭವ್ಯಂ ॥ ೨೨ ॥

ಎಲೈ ಭವ್ಯನೇ! ನೀನು ಈ ಸಂಸಾರಕ್ಕೆ ಕಾರಣವಾದ ಲೌಕಿಕಾಚಾರವನ್ನು ಆಶ್ರಯಿಸ ಬೇಡ. ಏಕಾಂಗಿಯಾಗಿ ಸಮತಾಭಾವವನ್ನು ಕೈಕೊಂಡು ನಿಜಾತ್ಮನ ಸ್ವರೂಪ ವನ್ನು ಭಾವಿಸು. ಆಗ ನೀನು ಅವನನ್ನು ಕಾಣುವೆ.

ಹಿರಿದು ಕಿರಿದೆಂಬ ಭೇದಂ ।
ಪರಮಾತ್ಮಾಲೋಕಿ ಜನಕೆಯಿಲ್ಲಂ ಮನದೊಳ್ ॥
ನಿರಘನ ಗುಣಸಾಮರ್ಥ್ಯವ ।
ನಿರಂತರಂ ಕಾಣ್ಬ ನೋಟಮೊಂದೇಯಕ್ಕುಂ ॥ ೨೩ ॥

ಎಲೈ ಭವ್ಯನೇ! ಮೇಲು-ಕೀಳು, ಸಣ್ಣದು-ದೊಡ್ಡದು ಮೊದಲಾದ ಭೇದ ಭಾವವು ಪರಮಾತ್ಮಜ್ಞಾನಿಗೆ ಇಲ್ಲ. ಆದುದರಿಂದ ಯಾವಾಗಲೂ ನಿಷ್ಕಲಂಕನಾದ ತನ್ನ ಪರಮಾತ್ಮನ ಸಮ್ಯಗ್ಜ್ಞಾನಾದಿ ಗುಣಗಳನ್ನು ನೋಡುವುದೊಂದೇ ನಿನ್ನ ಕೆಲಸವಾಗಲಿ.

ನಾನಾಲೋಕದೊಳಿರುತಿಹ ।
ನಾನಾವಸ್ತುಗಳ ಹಂಬಲವ ಬಿಡಲಕ್ಕುಂ ॥
ತಾನುಂ ತನ್ನೊಳು ಚಿಂತಿಸಿ- ।
ಯಾನಂದವೆ ಮೂರ್ತಿಯಾಗಿ ನಡೆವುದು ಭವ್ಯಂ ॥ ೨೪ ॥

ಎಲೈ ಭವ್ಯನೇ ! ಈ ನಾಲ್ಕು ಗತಿಗಳಲ್ಲಿರುವ ವಿಧವಿಧವಾದ ವಸ್ತುಗಳ ಆಸೆಯನ್ನು ಬಿಟ್ಟುಬಿಡು. ತಾನು ತನ್ನಾತ್ಮನಲ್ಲಿ ಲೀನನಾಗಿ, ಆನಂದಮಯನಾಗಿ ವರ್ತಿಸು, ಸುಖಿಯಾಗಿರು.

ಗುರು–ಶಿಷ್ಯನೆಂಬ ಭಾವವು ।
ಪರಮಾತ್ಮನ ದೃಷ್ಟಿಯವನಿಗಿಲ್ಲಂ ಮನದೊಳ್ ॥
ನಿರಘನ ಗುಣಸಾಮರ್ಥ್ಯಾದಿ ।
ನಿರಂತರಂ ಕಾಣ್ಬುದೊಂದೆ ನೋಟಮುಮಕ್ಕುಂ ॥ ೨೫ ॥

ಎಲೈ ಭವ್ಯನೆ ! ಪರಮಾತ್ಮಜ್ಞಾನಿಗೆ ತಾನು ಗುರು, ಅವನು ಶಿಷ್ಯನೆಂಬ ಭೇದಭಾವವು ಇಲ್ಲ. ಕೇವಲ ದೋಷರಹಿತನಾದ ಪರಮಾತ್ಮನ ಅನಂತ ಜ್ಞಾನ ಮೊದಲಾದ ಗುಣ–ಸ್ಮರಣಾದಿಗಳನ್ನು ಮಾಡುವುದೊಂದೇ ಅವನ ಕರ್ತವ್ಯವು.

ಎಲ್ಲಕ್ಕಿಂತಂ ಮೊದಲೋಳ್ ।
ಸಲ್ಲಲಿತಾಧ್ಯಾತ್ಮ ಶಾಸ್ತ್ರವನು ಕೇಳದೆ ತಾ- ॥
ನೆಲ್ಲಾ ಶಾಸ್ತ್ರವ ಕೇಳಲು ।
ಬಲ್ಲಿದ ಸುಖವನ್ನು ಬಯಸಲದು ತಾಂ ಬಹುದೇ ॥ ೨೬ ॥

ಎಲೈ ಭವ್ಯನೇ! ನೀನಂ ಪೂರ್ವಜನ್ಮದಲ್ಲಿ ಮಧುರವಾದ ಅಧ್ಯಾತ್ಮಶಾಸ್ತ್ರವನ್ನು ಕೇಳಿದ್ದಿಲ್ಲ. ಜಾರ, ಚೋರರ ಕತೆಯ ಶಾಸ್ತ್ರಗಳನ್ನು ಕೇಳಿರಬಹುದು. ಆದರಿಂದ ನಿನಗೆ ಅಕ್ಷಯವಾದ ಸುಖವು ದೊರೆಯಬಹುದೇ ? ಎಂದೂ ದೊರೆಯಲಾರದು.

ಆವಾವ ಯುಕ್ತಿಯಿಂದಲು ।
ಜೀವಗುಣಂ ಸಾಧ್ಯಮಪ್ಪುದೊಂದೆಯಶಕ್ಯಂ ॥
ಭಾವದೊಳಗಾತ್ಮಪರಿಣತೆ ।
ಯಾವಗಮಿರಲಂತವಂಗೆ ತಾಂ ನೆರೆ ಸಾಧ್ಯಂ ॥ ೨೭ ॥

ಎಲೈ ಭವ್ಯನೆ! ಯಾವುದೇ ಯುಕ್ತಿಯಿಂದ, ತರ್ಕದಿಂದ ಜೀವನ ಅನಂತಜ್ಞಾನಾದಿ ಗುಣಗಳನ್ನು ಪಡೆಯುವುದು ಸಾಧ್ಯವಿಲ್ಲ. ಶುದ್ಧ ಮನಸ್ಸಿನಿಂದ ಪರಮಾತ್ಮನ ಸ್ವರೂಪವನ್ನು ಯಾವಾಗಲೂ ಚಿಂತಿಸುವುದರಿಂದ ಮಾತ್ರ ಅದು ಸಾಧ್ಯವಾಗುವುದು.

ದಿನಕೊಂದು ಘಳಿಗೆಯಾನುಂ ।
ಜಿನನಾಕಾರದೊಳು ತನ್ನ ನಿಜನುಂ ಕಾಣ್ಬಗೆ ॥
ಜನಿಸಿದ ಕರ್ಮಸಮೂಹಂ ।
ದಿನಕರನುದಯದೊಳು ಪರಿನ ಕತ್ತಲೆಗೆ ಸಮಂ ॥ ೭೮ ॥

ಎಲೈ ಭವ್ಯನೇ! ನೀನು ದಿವಸದಲ್ಲಿ ಒಂದು ಘಳಿಗೆಯಾದರೂ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನ ಸ್ವರೂಪವನ್ನು ತನ್ನ ಹೃದಯದಲ್ಲಿ ಧ್ಯಾನಿಸಿದರೆ ಸೂರ್ಯೋದಯದಿಂದ ಕತ್ತಲೆಯು ನಾಶವಾಗುವಂತೆ ನೀನು ಗಳಿಸಿದ ಕರ್ಮಗಳು ಶೀಘ್ರವಾಗಿ ನಾಶವಾಗುವುವು.

ವ್ಯಾಕರಣಂ ಮೊದಲಾಗಿಯು ।
ನೇಕಾಗಮುಮರಿದು ತಪವ ಮಾಡುವೆನೆಂದೊಡೆ ॥
ಈ ಕಾಲದೊಳಲ್ಪಾಯುಃ- ।
ಷ್ಯೈಕಾಗ್ರಂ ಮಾಳ್ಪ ಚಿತ್ತಶಕ್ತಿಯುಮಿಲ್ಲಂ ॥ ೭೯ ॥

ಎಲೈ ಭವ್ಯನೇ! ನೀನು ವ್ಯಾಕರಣ, ತರ್ಕ ಮೊದಲಾದ ಶಾಸ್ತ್ರವನ್ನು ತಿಳಿದು ಅನಂತರ ಪರಮಾತ್ಮಧ್ಯಾನವನ್ನು ಮಾಡುವೆನೆಂದು ಹೇಳಬೇಡ. ಯಾಕೆಂದರೆ ಈ ಕಾಲದಲ್ಲಿ ನಮ್ಮ ಆಯುಷ್ಯವು ಬಹಳ ಕಡಿಮೆಯಾದುದರಿಂದ ಏಕಾಗ್ರತೆಯಿಂದ ಧ್ಯಾನವನ್ನು ಮಾಡಲು ಚಿತ್ತಶಕ್ತಿಯು ಸಾಕಾಗಲಾರದು.

ಅಚ್ಚೊತ್ತಿದಂತೆ ಮನದೊಳ-।
ಗೆಚ್ಚರಿಕೆಯೊಳಿರ್ದಡವಗೆಯಾ ನಿಜ ಪರಮಂ ॥
ಕಚ್ಚಿದ ಕರ್ಮಸಮೂಹಂ ।
ಕಿಚ್ಚಂ ಪಿಡಿದಿರ್ಪ ಪುಲ್ಲ ಗುಡ್ಡೆಗೆ ಸದೃಶಂ ॥ ೮೦ ॥

ಎಲೈ ಭವ್ಯನೇ! ನೀನು ಯಾವಾಗಲೂ ತನ್ನ ಮನಸ್ಸಿನಲ್ಲಿ ಪರಮಾತ್ಮಧ್ಯಾನವನ್ನು ಅಚ್ಚೊತ್ತಿದಂತೆ ಏಕಾಗ್ರ ಮನಸ್ಸಿನಿಂದ ಮಾಡಿದೆಯಾದರೆ ಬೆಂಕಿಯಿಂದ ಹುಲ್ಲಿನ ರಾಶಿಯು ಸುಟ್ಟು ಬೂದಿಯಾಗುವಂತೆ ನಿನಗೆ ಅಂಟಿದ ಸಕಲ ಕರ್ಮಗಳೂ ಶೀಘ್ರವಾಗಿ ನಾಶವಾಗುವುವು.

ಉಕ್ತಪುನರುಕ್ತ ಶಬ್ದ-।
ವ್ಯಕ್ತಂಗಳಿವಲ್ಲವೆಂದು ಬಿಡದಿರಿ ಭವ್ಯರ್ ॥
ತತ್ತ್ವರುಚಿಯಿಂದ ಕರ್ಮದ ।
ಶಕ್ತಿಯು ತಗ್ಗಿಸುವುದೊಂದು ಯುಕ್ತಿಯೇ ಸಾಲ್ಗುಂ ॥ ೮೧ ॥

ಎಲೈ ಭವ್ಯರೇ! ಬಾರಿ ಬಾರಿಗೂ ಹೇಳಿದ ವಿಷಯವನ್ನೇ ಹೇಳುತ್ತಾರೆ. ಅದೇ ಶಬ್ದಗಳು, ಅದೇ ವಿಷಯಗಳೆಂದು ತಿರಸ್ಕಾರದಿಂದ ತತ್ತ್ವ ಸ್ವರೂಪವನ್ನು ಬಿಡದೆ ಯಾವಾಗಲೂ ಅದರಲ್ಲಿ ನಂಬಿಕೆಯಿಟ್ಟು, ಕರ್ಮಗಳನ್ನು ನಾಶ ಮಾಡುವುದೊಂದೇ ಮುಕ್ತಿಗೆ ಮುಖ್ಯ ಉಪಾಯ.

ಅಧ್ಯಾತ್ಮಶಾಸ್ತ್ರದೊಳಗತಿ ।
ಶಬ್ದಾದಿ ಪುನರುಕ್ತಿಗಳನು ನೋಡದೆ ಬುಧರುಂ ॥
ಬುದ್ಧಿಯೊಳಗಾತ್ಮತತ್ತ್ವವು-।
ನುದ್ಯೋಗಿಸಿ ಮರಳಿಯುದನೆ ನೋಳ್ಪುದು ನಿಚ್ಚಂ ॥ ೩೨ ॥

ಎಲೈ ಭವ್ಯನೇ! ವಿದ್ವಾಂಸರು ಅಧ್ಯಾತ್ಮ ಶಾಸ್ತ್ರದಲ್ಲಿರುವ ಶಬ್ದಾದಿ ದೋಷಗಳನ್ನು ವಿಚಾರಿಸದೆ, ತನ್ನ ಅಂತರಂಗದಲ್ಲಿ ಪ್ರತಿನಿತ್ಯವೂ ಆತ್ಮನನ್ನು ಭಾವಿಸಬೇಕು ಮತ್ತು ಪುನಃ ಪುನಃ ಚಿಂತಿಸಬೇಕು.

ಅತಿಶಯಕರ ವರ ಧರ್ಮವ ।
ಮತಿವಂತರು ಸಕಲ ಶಾಸ್ತ್ರಪಾರಂಗತರುಂ ॥
ಯತಿಗಳನು ಕೇಳಿ ದೃಢದಿಂ ।
ವ್ರತ–ಗುಣ–ಶೀಲಗಳ ಪಿಡಿದು ಭಾವಿಸಿ ಸೌಖ್ಯಂ ॥ ೩೩ ॥

ಎಲೈ ಭವ್ಯರೇ ! ಬುದ್ಧಿವಂತರಾದ ಮತ್ತು ಸಕಲ ಶಾಸ್ತ್ರಪಾರಂಗತರಾದ ನೀವು ಪರಮಪವಿತ್ರವಾದ ಜಿನಧರ್ಮವನ್ನು ಯತಿಗಳಿಂದ ಕೇಳಬೇಕು. ಆ ಮೇಲೆ ವಿಶ್ವಾಸದಿಂದ ಪಂಚಾಣುವ್ರತ, ಸಪ್ತಶೀಲವ್ರತ ಮೊದಲಾದುವುಗಳನ್ನು ಧರಿಸಿ, ಭಾವಿಸಿ ಉತ್ತಮವಾದ ಮೋಕ್ಷಸುಖವನ್ನು ಹೊಂದಿರಿ.

ನಿಧಿಕಂಡ ಬುದ್ಧಿವಂತಂ ।
ಹೊಂದಿಯುವಂ ಬುದ್ಧಿಯಿಂದ ಸಂರಕ್ಷಿಪವೋಲ್ ॥
ಬುಧನು ನಿಜಗುಣವ ಕಂಡೊಡೆ- ।
ಯುದನುಂ ಕೆಡದಂತೆ ಸತತ ಪಾಲಿಸುತಿರ್ಪಂ ॥ ೩೪ ॥

ಎಲೈ ಭವ್ಯನೇ! ನಿಧಿಯನ್ನು ಕಂಡ ಬುದ್ಧಿವಂತನು ಹೇಗೆ ಅದನ್ನು ರಕ್ಷಿಸುತ್ತಾನೆಯೋ ಅದೇ ಪ್ರಕಾರ ತನ್ನ ಪರಮಾತ್ಮನ ಸ್ವರೂಪವನ್ನು ತಿಳಿದ ಬುದ್ಧಿವಂತನು ಅದು ನಾಶವಾಗದಂತೆ ಯಾವಾಗಲೂ ಪಾಲಿಸುತ್ತಾನೆ.

ಶುದ್ಧಾತ್ಮಾಭ್ಯಾಸಯುತಂ ।
ಶುದ್ಧಂ ತಾನಾಗಿ ನಿತ್ಯ ಸುಖದೊಳಗಿರ್ಪಂ ॥
ಶುದ್ಧಮನೆ ಬಿಟ್ಟು ಬಾಹ್ಯದಿ ।
ಬಿದ್ದೊಡೆ ಕರ್ಮಂಗಳಿಂದ ಬದ್ಧನೆಯುಕ್ಕುಂ ॥ ೩೫ ॥

ಎಲೈ ಭವ್ಯನೇ! ಪರಿಶುದ್ಧನಾದ ತನ್ನ ಪರಮಾತ್ಮಾಭ್ಯಾಸದಿಂದ ಯುಕ್ತನಾದ ಮನುಷ್ಯನು, ನಿರ್ಮಲವಾದ ಚಿತ್ತವುಳ್ಳವನಾಗಿ ನಿತ್ಯ ಸುಖಿಯಾಗಿರುವನು. ಶುದ್ಧಾತ್ಮಸ್ವರೂಪವನ್ನು ಬಿಟ್ಟು ಬಾಹ್ಯವಸ್ತುಗಳಾದ ಸ್ತ್ರೀ, ಪುತ್ರ, ಮನೆ ಮೊದಲಾದವುಗಳಲ್ಲಿ ಆಸಕ್ತನಾದರೆ ಪುನಃ ಕರ್ಮಗಳಿಂದ ಬದ್ಧನಾಗಿ ದುಃಖಿಯಾಗುವನು.

ತುಸಮುಸವೆಂಬೀ ಶಬ್ದವ- ।
ನುಸುರುತ ಶಿವಭೂತಿ ನಾಮನೇಕಾಗ್ರತೆಯಿಂ- ॥
ದಶವು ನಿಜ ತತ್ತ್ವರುಚಿಯಿಂ ।
ವಿಷಮ ಭವಂಗಳನು ಕಳೆದು ಮುಕ್ತಿಗೆ ಸಂದಂ ॥ ೩೬ ॥

ಎಲೈ ಜೀವನೇ! ಶಿವಭೂತಿಯೆಂಬವನು ಕೇವಲ 'ತುಸಮುಸ'ವೆಂಬ ಶಬ್ದವನ್ನು ಚ್ಚರಿಸುತ್ತಾ, ಏಕಾಗ್ರ ಭಾವನೆಯಿಂದ ತನ್ನ ಪರಮಾತ್ಮನಲ್ಲಿ ನಂಬಿಕೆಯನ್ನಿಟ್ಟು, ಘೋರವಾದ ಈ ಸಂಸಾರವನ್ನು ತೊರೆದು ಮೋಕ್ಷವನ್ನು ಹೊಂದಿದನು.

ಆಹಾರ ಭಯ ಪರಿಗ್ರಹ ।
ಮೋಹಜ ರತಿಸಂಜ್ಞೆಗಳು ತಗ್ಗಿಸಿ ಪದಪಿಂ ॥
ದೇಹದೊಳು ರಾಗಿಯಾಗದೆ ।
ಸಾಹಸಿಯಾಗಾತ್ಮ ಶುದ್ಧತರ ಭಾವನೆಯೊಳ್ ॥ ೩೭ ॥

ಎಲೈ ಆತ್ಮನೇ! ನೀನು ಆಹಾರ, ಭಯ, ಮೈಥುನ ಮತ್ತು ಪರಿಗ್ರಹ ಮೊದಲಾದ ಮೋಹನೀಯ ಕರ್ಮದಿಂದುಂಟಾಗುವ ಇಚ್ಛೆಗಳನ್ನು ಕಡಿಮೆ ಮಾಡಿ ಹಾಗೂ ಶರೀರದ ಮಮತೆಯನ್ನು ತೊರೆದು ತನ್ನ ಪರಮಾತ್ಮನ ಪರಮ ಪವಿತ್ರವಾದ ಭಾವನೆಯಲ್ಲಿ ದೃಢಮನಸ್ಸಿನಿಂದ ಲೀನನಾಗಿರು.

ಶುದ್ಧ ಸ್ಫಟಿಕದ ಶಿಲೆಯೊಳ್ ।
ತಿದ್ದಿದ ಜಿನಬಿಂಬದಂತೆ ತನ್ನಂಗದೊಳಂ ॥
ಶುದ್ಧಾತ್ಮನನ್ನು ಭಾವಿಸೆ ।
ಬದ್ಧಗಳಾಗಿರ್ದ ಕರ್ಮವಾಗಲೆ ಕೆಡುಗುಂ ॥ ೩೮ ॥

ಎಲೈ ಆತ್ಮನೇ! ಅತ್ಯಂತ ಪರಿಶುದ್ಧವಾದ ಸ್ಫಟಿಕದ ಶಿಲೆಯಿಂದ ನಿರ್ಮಿತವಾದ ಜಿನಬಿಂಬವು ಹೇಗೆ ನಿರ್ಮಲವಾಗಿರುವುದೋ ಅದರಂತೆ ತನ್ನ ಶರೀರದಲ್ಲಿರುವ ಪರಮಪವಿತ್ರನಾದ ಆತ್ಮನನ್ನು ಭಾವಿಸಿದರೆ ನಮಗಂಟಿದ ಸಮಸ್ತ ಕರ್ಮಗಳು ಶೀಘ್ರವಾಗಿ ನಾಶವಾಗುವುವು.

ಉತ್ತಮ ಸಂಹನನಂಗಳ್ ।
ಮತ್ತೆ ಕುಲ–ಕ್ಷೇತ್ರ–ಕಾಲ–ಯತಿಜನಲಾಭಂ ॥
ತತ್ತ್ವರುಚಿ–ಬೋಧ–ಚರಣಗ- ।
ಳೊತ್ತಿರಲಾತಂಗೆ ಆತ್ಮಭಾವನೆಯ ಫಲಂ ॥ ೩೯ ॥

ಎಲೈ ಆತ್ಮನೇ! ಉತ್ತಮವಾದ ವಜ್ರದ ಹಾಗೆ ಗಟ್ಟಿಯಾದ ಎಲುಬುಳ್ಳ ವಜ್ರ ವೃಷಭನಾರಾಚ ಸಂಹನನವೂ ಹಾಗೂ ಉತ್ತಮವಾದ ಕುಲ, ಕ್ಷೇತ್ರ, ಕಾಲ ಮತ್ತು ಮುನಿಗಳ ಉಪದೇಶ ಮತ್ತು ಸಮ್ಯಗ್ದರ್ಶನ ಜ್ಞಾನಚಾರಿತ್ರ ಇವುಗಳ ಪ್ರಾಪ್ತಿಯೇ ಆತ್ಮಭಾವನೆಯ ಫಲದಿಂದುಂಟಾಗುವುವು.

ಎಂದೆಂದಿಗು ಕುಂದಿಲ್ಲದ ।
ಬೃಂದಾರಕವಂದ್ಯ ವೀತರಾಗ ನಿಜಾತ್ಮನ-॥
ನೊಂದೆರಡು ಘಳಿಗೆ ನೆನೆದರೆ ।
ಸಂದಮುರಿಕ್ರೀಡೆಯಲ್ಲಿ ಚಿನ್ಮಯನಕ್ಕುಂ ॥ ೪೦ ॥

ಎಲೈ ಭವ್ಯನೇ ! ನೀನು ಎಂದೆಂದೂ ಶಾಶ್ವತನಾದ ಮತ್ತು ದೇವಾದಿದೇವತೆಗಳಿಂದ ವಂದ್ಯನಾದ ವೀತರಾಗ ಪರಮಾತ್ಮನ ಭಾವನೆಯನ್ನು ನಿತ್ಯ ಒಂದೆರಡು ಘಳಿಗೆಯಾದರೂ ಭಾವಿಸಿದರೆ ಸ್ವರ್ಗಾದಿ ಸುಖವನ್ನೂ ಕೊನೆಗೆ ಮುಕ್ತಿಯನ್ನೂ ಪಡೆಯುವಿ.

ನಿರಘನ ರುಚಿವಡೆದವನಿಗೆ ।
ಪರಿಗ್ರಹಾದಿಗಳ ತೊಡರದೇಂ ತಡೆದಪುದೇ ॥
ಧರೆಯೊಳು ಮದವೆದ್ದಾನೆಯು ।
ನೆರೆದಿಹ ಕಡ್ಡಿಗಳ ಬೇಲಿಯೇಂ ತಡೆದಪುದೇ ॥ ೪೧ ॥

ಎಲೈ ಭವ್ಯನೇ! ಲೋಕದಲ್ಲಿ ಮದವೇರಿದ ಆನೆಯನ್ನು ಸಪೂರವಾದ ಕಡ್ಡಿಗಳಿಂದ ಮಾಡಿದ ಬೇಲಿಯು ಹೇಗೆ ತಡೆಯಲಾರದೋ ಅದೇ ಪ್ರಕಾರವಾಗಿ ತನ್ನ ಪರಮಾತ್ಮ ಧ್ಯಾನದಲ್ಲಿ ಮಗ್ನನಾದವನನ್ನು ಪರಿಗ್ರಹಾದಿ ಬಾಧೆಗಳು ತಡೆಯಲಾರವು.

ಉತ್ತಮ ತಿತೀಕ್ಷೆ ಮೊದಲಹ ।
ಪತ್ತುಂ ಧರ್ಮಗಳು ಪ್ಯೈದು ಸಮಿತಿವ್ರತಗಳ್ ॥
ರತುನತ್ರಯ ಗುಪ್ತಿತ್ರಯ ।
ಮೂತೇಂ ಪನ್ನೆರಡು ತಪವು ನಿಜದೊಳೆಯುಕ್ಕುಂ ॥ ೪೨ ॥

ಎಲೈ ಭವ್ಯನೇ! ಉತ್ತಮ ಕ್ಷಮಾದಿ ದಶ ಧರ್ಮಗಳೂ ಈರ್ಯ್ಯಾಸಮಿತಿ ಮೊದಲಾದ ಐದು ಸಮಿತಿಗಳೂ ಸಮ್ಯಗ್ದರ್ಶನ ಜ್ಞಾನಚಾರಿತ್ರಗಳೂ ಮನ ವಚನಕಾಯ ಗುಪ್ತಿಗಳೂ ಹಾಗೂ ಅನಶನಾದಿ ಹನ್ನೆರಡು ತಪಗಳೂ ತನ್ನಾತ್ಮನ ಧ್ಯಾನದಿಂದಲೇ ಸಿದ್ಧಿಯಾಗುವುವು.

ಹುದಿಗುಂ ಷೋಡಶಭಾವನೆ ।
ಹೊದೆಗುಮನುಪ್ರೇಕ್ಷೆ ಪರೀಷಹಂಗಳ ಜಯಮುಂ ॥
ಮೊದಲೊಳಗಾತ್ಮನ ಕಂಡೊಡೆ ।
ಪದಪಿಂ ಸಾಧ್ಯಗಳುಮಿಲ್ಲದಿರ್ದೊಡಮಿಲ್ಲಂ ॥ ೪೩ ॥

ಎಲೈ ಭವ್ಯನೇ! ನೀನು ಪ್ರಥಮದಲ್ಲಿ ಪರಮಾತ್ಮನ ಭಾವನೆಯನ್ನು ಭಾವಿಸಿದೆಯಾದರೆ ಷೋಡಶಭಾವನೆಗಳೂ ದ್ವಾದಶಾನುಪ್ರೇಕ್ಷೆಗಳೂ ಮತ್ತು ಪರೀಷಹಜಯಂಗಳೂ ಪ್ರಾಪ್ತವಾಗುವುವು. ತನ್ನ ಪರಮಾತ್ಮಸ್ವರೂಪವನ್ನು ನೀನು ತಿಳಿಯದಿದ್ದರೆ ನಿನಗೆ ಅವುಗಳು ಎಂದೂ ಸಾಧ್ಯವಾಗಲಾರವು.

ಆರಾವಶ್ಯಕವುಂ ಸಾ- ।
ಲ್ಕಾರಾಧನೆ ವಿಷಯಜಯುವು ಪಂಚಾಚಾರಂ ॥
ಧೀರತೆ ಮೂಲೋತ್ತರಗುಣ ।
ಸಾರಾತ್ಮಧ್ಯಾನವೊಂದರೊಳಗೇಯುಕ್ಕುಂ ॥ ೪೪ ॥

ಎಲೈ ಭವ್ಯನೇ! ನಿನಗೆ ಸಾಮಾಯಿಕ, ಸ್ತವನ, ಪ್ರತಿಕ್ರಮಣ ಮೊದಲಾದ ಷಡಾವಶ್ಯಕ ಕ್ರಿಯೆಗಳೂ ದರ್ಶನಾರಾಧನಾ, ಜ್ಞಾನ, ಚಾರಿತ್ರ ಮತ್ತು ತಪವೆಂಬ ನಾಲ್ಕು ಆರಾಧನೆಗಳೂ ಪಂಚೇಂದ್ರಿಯಜಯವೂ ಹಾಗೂ ದರ್ಶನ, ಜ್ಞಾನ, ಚಾರಿತ್ರ ವೀರ್ಯ ಮತ್ತು ತಪಸ್ಸೆಂಬ ಪಂಚಾಚಾರಗಳೂ ಮದ್ಯ, ಮಾಂಸ ಮಧು ಮತ್ತು ಪಂಚ ಉದುಂಬರಫಲ ಇವುಗಳನ್ನು ತ್ಯಾಗ ಮಾಡುವ ಮೂಲಗುಣವೂ ಮತ್ತು ಪಂಚಾಣು ವ್ರತ, ಸಪ್ತಶೀಲರೂಪವಾದ ಉತ್ತರ ಗುಣಗಳೂ ಕೂಡ ತನ್ನ ಪರಮ ಪವಿತ್ರನಾದ ಆತ್ಮನ ಧ್ಯಾನದಿಂದಲೇ ಸಿದ್ಧಿಯಾಗುವುವು

ಎಲ್ಲವು ನಿಶ್ಚಯನಯಂಗಳು- ।
ಮಲ್ಲದೆ ವ್ಯವಹಾರನಯಮನುಸುರುವದೆಲ್ಲಂ ॥
ಬಲ್ಲವರು ತಿಳಿದುಕೊಂಬುದು- ।
ಮೆಲ್ಲಾ ಶಾಸ್ತ್ರಗಳು ನಯವ ಬಿಟ್ಟಿಹವಲ್ಲಂ ॥ ೪೫ ॥

ಲೋಕದಲ್ಲಿ ಎಲ್ಲಾ ವಸ್ತುಗಳು ನಿಶ್ಚಯ ಮತ್ತು ವ್ಯವಹಾರನಯಂಗಳಿಂದ ಯುಕ್ತಗಳಾಗಿವೆ. ಎಲ್ಲಾ ಶಾಸ್ತ್ರಗಳು ವ್ಯವಹಾರ ಮತ್ತು ನಿಶ್ಚಯನಯಂಗಳನ್ನು ಬಿಟ್ಟು ಇಲ್ಲವೆಂದು ಬುದ್ಧಿವಂತರು ತಿಳಿಯತಕ್ಕದ್ದು. ಅಂದರೆ ಪ್ರತಿಯೊಂದು ವಸ್ತುವೂ ವ್ಯವಹಾರ ಮತ್ತು ಪಾರಮಾರ್ಥಿಕ ದೃಷ್ಟಿಯಿಂದ ತಿಳಿಯಲು ಯೋಗ್ಯವಾಗಿದೆ ಎಂದರ್ಥವು.

ನಾನಾನಯಪ್ರವೀಣ ।
ಜ್ಞಾನಿಗಳುಂ ಜೈನಮತದೊಳಾತ್ಮನ ತಿಳಿಗುಂ ॥
ಹೀನನಯರಾಗಿ ಮಿಥ್ಯಾ ।
ಜ್ಞಾನಿಗಳೇಕಾಂತ ಮತದೊಳಾತ್ಮನ ಕಾಣರ್ ॥ ೪೬ ॥

ಎಲೈ ಭವ್ಯನೇ! ನಾನಾ ವಿಧವಾದ ನಯವನ್ನು ತಿಳಿದಂತಹ ಸುಜ್ಞಾನಿಗಳು ಅಂದರೆ ಅನೇಕಾಂತವಾದಿಗಳು ಜಿನಮತದಲ್ಲಿ ತನ್ನ ಆತ್ಮನ ಸ್ವರೂಪವನ್ನು ತಿಳಿಯುವರು. ನಯವಿಹೀನರಾದ-ಏಕಾಂತವಾದಿಗಳಾದ ಮಿಥ್ಯಾಜ್ಞಾನಿಗಳು ತನ್ನ ಆತ್ಮನ ಸ್ವರೂಪವನ್ನರಿಯಲಾರರು.

ವಚನಗಳ ನುಡಿದು ತತ್ತ್ವದ ।
ರುಚಿಯುಂ ಸಾಧಿಸುವೆನೆಂಬನಾತಂ ಬಾಲಂ ॥
ವಚನಗಳ ಬಿಟ್ಟು ತತ್ತ್ವದ ।
ರುಚಿಯುಂ ಧ್ಯಾನದೊಳೆ ನೋಡುವಾತನೆ ಮುನಿಪಂ ॥ ೪೭ ॥

ಎಲೈ ಆತ್ಮನೇ ! ಕೇವಲ ಬಾಯಿಯಿಂದ ಮಂತ್ರಗಳನ್ನು ಉಚ್ಚರಿಸುತ್ತಾ ಪದಸ್ಥ ಧ್ಯಾನದಿಂದಲೇ ತನ್ನ ಆತ್ಮತತ್ತ್ವದ ಸ್ವರೂಪವನ್ನು ಸಾಧಿಸುವೆನೆಂದು ಹೇಳುವವನು ಅತಿ ಮೂರ್ಖನು. ಯಾವನು ಮಾತಿನ ಆಡಂಬರವನ್ನು ಬಿಟ್ಟು ಪರಮಾರ್ಥವಾಗಿ ದೃಢ ಮನಸ್ಸಿನಿಂದ ತನ್ನ ಆತ್ಮಧ್ಯಾನವನ್ನು ಮಾಡುವನೋ ಅವನೇ ಮುನಿಯು ಎಂದು ತಿಳಿ.

ನಿಜತತ್ತ್ವ ರುಚಿಯೆಂ ದರ್ಶನ ।
ನಿಜತತ್ತ್ವಮಂತಿಳಿದು ನೋಳ್ಪುದದು ಸದ್ಜ್ಞಾನಂ ॥
ನಿಜತತ್ತ್ವನಿಶ್ಚಲತ್ವಂ ।
ತ್ರಿಜಗದೊಳಗಂ ಬಲ್ಲವರ್ಗೆಯದು ಚಾರಿತ್ರಂ ॥ ೪೮ ॥

ಎಲೈ ಭವ್ಯನೇ! ತನ್ನಾತ್ಮಸ್ವರೂಪದಲ್ಲಿ ನಂಬಿಕೆಯನ್ನಿಡುವುದೇ ನಿಶ್ಚಯ ಸಮ್ಯಗ್ದರ್ಶನವು. ತನ್ನಾತ್ಮಸ್ವರೂಪವನ್ನು ಚೆನ್ನಾಗಿ ತಿಳಿದು ನೋಡುವುದೇ ನಿಶ್ಚಯ ಸಮ್ಯಗ್ಜ್ಞಾನವು. ತನ್ನಾತ್ಮಸ್ವರೂಪವನ್ನು ತಿಳಿದು ಚಂಚಲನಾಗದೆ ತನ್ಮಯನಾಗುವುದು ನಿಶ್ಚಯಚಾರಿತ್ರವೆಂದು ಬುದ್ಧಿವಂತರು ಹೇಳುತ್ತಾರೆ.

ಪರಮಾತ್ಮನೆಂಬುದೊಂದೇ ॥
ಯುರುವಚನದ ರಚನೆಯುಳ್ಳ ಜೀವಂ ಶಾಸ್ತ್ರದ ।
ಶರಧಿಯ ಕಡೆ ಕಾಣ್ಬನು ಮ- ।
ತ್ತಿರುಳುಂ ಪಗಲೋದಿ ದಣಿದವಂ ಕಡೆಗಾಣಂ ॥ ೪೯ ॥

ಎಲೇ ಭವ್ಯನೇ! ತನ್ನ ಪರಮಾತ್ಮನ ಧ್ಯಾನದಿಂದ ಕೂಡಿದ ಮನುಷ್ಯನು ಸಮಸ್ತವಾದ ಶಾಸ್ತ್ರವೆಂಬ ಸಮುದ್ರದ ದಡವನ್ನು ಹೊಂದುವನು ಮತ್ತು ಆತ್ಮನನ್ನು ಚಿಂತಿಸದೆ ರಾತ್ರಿ–ಹಗಲು ಶಾಸ್ತ್ರವನ್ನೋದಿ ದಣಿದವನು ದಡವನ್ನು ಹೊಂದಲಾರನು.

ಅದರಿಂದ ಮಹಾಯತಿಗಳ್ ।
ಮೊದಲೊಳ್ ಪರಮಾತ್ಮಗುಣಂಗಳಂ ಸ್ತುತಿಯಿಸುತಂ ॥
ಮದರಹಿತರಾಗಿ ಶಾಸ್ತ್ರವ ।
ಸದಮಲಭಾವಜ್ಞರಾದ ಜನರಿಗೆ ಪೇಳ್ವರ್ ॥ ೫೦ ॥

ಆದುದರಿಂದ ಮಹಾಯತೀಶ್ವರರು ಗರ್ವರಹಿತರಾಗಿ, ಶಾಸ್ತ್ರವನ್ನಾರಂಭಿಸುವಾಗ ಪರಮಾತ್ಮನ ಗುಣಸ್ತವನವನ್ನು ಮಾಡಿ, ಶುದ್ಧಾಂತಃಕರಣರಾದ ಜನಗಳಿಗೆ ಶಾಸ್ತ್ರೋಪದೇಶವನ್ನು ಮಾಡುತ್ತಾರೆ.

ಜಿನಮುಖಕಮಲವಿನಿರ್ಗತ ।
ವಿನುತಿಪ್ಪತ್ತಾರು ಕೋಟಿ ಪದದರ್ಥಗಳಿಂ ॥
ಮುನಿಪತಿ ಗಣಧರ ಪೇಳ್ದಂ ।
ಜನಮಾತ್ಮನ ಪೇಳಲಕ್ಕುಮೇನಲ್ಪವಚಂ ॥ ೫೧ ॥

ಜಿನೇಶ್ವರನ ಮುಖಕಮಲದಿಂದ ಹೊರಟಂತಹ ಇಪ್ಪತ್ತಾರು ಕೋಟಿ ಪದಗಳ ಅರ್ಥವನ್ನೂ ಯತಿಪತಿಗಳಾದ ಗಣಧರರು ಹೇಳಿದಂತಹ ವಿಷಯವನ್ನೂ ಆತ್ಮಧ್ಯಾನಿಯಲ್ಲದೆ ಇತರರಿಂದ ಹೇಳಲಾಗುವುದೇ? ಅಲ್ಪಜ್ಞಾನಿಗಳಿಗೆ ಅದು ಸಾಧ್ಯವಾಗಲಾರದು.

ಏಕಾದಶಾಂಗತನಕಂ ।
ಲೌಕಿಕದಾಗಮುಮನೆಲ್ಲ ಪಠಿಯಿಸಿ ನಿಚ್ಚಂ ॥
ಸ್ವಾಕಾರನು ಜಿನನಂದದಿ ।
ಕೈಕೊಂಡುಂ ನಿಜವ ನೋಡದವನೆಯಭವ್ಯಂ ॥ ೫೨ ॥

ಏಕದಶಾಂಗದ ವರೆಗೆ ಸಮಸ್ತವಾದ ಶಾಸ್ತ್ರವನ್ನು ಅಭ್ಯಾಸ ಮಾಡಿದವನಾದರೂ ಸಮಸ್ತವನ್ನು ತ್ಯಜಿಸಿ ನಿರ್ಗ್ರಂಥನಾಗಿ ತನ್ನ ಆತ್ಮಧ್ಯಾನವನ್ನು ಮಾಡದವನು ಲೋಕದಲ್ಲಿ ಅಭವ್ಯನೆಂದು ಹೇಳಲ್ಪಡುವನು.

ಗ್ರೈವೇಯಕದೊಳು ಜನಿಸಿಯು ।
ಭಾವಿಸುವನು ಭವ್ಯನುಂ ನಿಜಾತ್ಮನಗುಣವಂ ॥
ಭವ್ಯತೆಯಿಲ್ಲದ ಜೀವಂ-।
ಗವ್ಯಯ ಸುಖಮಿಲ್ಲಮಾತ್ಮಭಾವನೆಯಿಲ್ಲಂ ॥ ೫೩ ॥

ಭವ್ಯನು ಗ್ರೈವೇಯಕವೆಂಬ ಸ್ವರ್ಗದಲ್ಲಿ ಜನಿಸಿದರೂ ಕೂಡಾ ಅಲ್ಲಿ ತನ್ನ ಆತ್ಮ ಭಾವನೆಯನ್ನು ಮಾಡುವನು. ಅಭವ್ಯನಿಗೆ ಆತ್ಮಧ್ಯಾನವೂ ಸಾಧ್ಯವಾಗುವುದಿಲ್ಲ, ಮೋಕ್ಷಸುಖವೂ ದೊರೆಯಲಾರದು.

ನಾರಕ ಮಧ್ಯದಿ ಕೋಪದ ।
ಕಾರಣದಿಂ ಪುಟ್ಟಿ ನವೆಯುತ್ತಿರ್ಪ್ಪಂ ನಿಚ್ಚಂ ॥
ಸಾರತರ ತತ್ತ್ವಭಾವದ ।
ದಾರಿಯ ಕಂಡವನು ಪರಮಮುಕ್ತಿಯ ಪಡೆವಂ ॥ ೫೪ ॥

ಅಭವ್ಯನು ಕ್ರೋಧದ ದೆಸೆಯಿಂದ ನರಕದಲ್ಲಿ ಜನಿಸಿ, ಸದಾ ಅನೇಕ ತರದ ದುಃಖಗಳನ್ನು ಅನುಭವಿಸುತ್ತಿರುವನು. ತನ್ನ ಆತ್ಮಭಾವನೆಯನ್ನು ಭಾವಿಸುವ ಕಲೆಯನ್ನು ತಿಳಿದ ಭವ್ಯನು ಮೋಕ್ಷಸುಖವನ್ನು ಹೊಂದುವನು.

ಪಸುವಿನ ಮಾಂಸದ ಕೆಚ್ಚಲೊ - ।
ಳಿಸೆವ ಕ್ಷೀರದವೊಲಾತ್ಮ ಕರ್ಮದೊಳಿರ್ಪ್ಪಂ ॥
ಅಸಮ ನಿಜ ಗುಣಮುನಲ್ಲದೆ-।
ಯುಸುರುವರಾರ್ ಕರ್ಮಜನಿತ ದೋಷಮನೆಲ್ಲಂ ॥ ೫೫ ॥

ಎಲೈ ಭವ್ಯನೇ! ಹಸುವಿನ ಮಾಂಸ. ರಕ್ತಮಯವಾದ ಕೆಚ್ಚಲಿನಲ್ಲಿ ಹೇಗೆ ಹಾಲಿರುವುದೋ ಅದರಂತೆ ತನ್ನ ಆತ್ಮನು ಕರ್ಮದೊಡನೆ ಪರಸ್ಪರ ಬೆರೆತಿರುವನು. ಆದುದರಿಂದ ಅಂತಹ ಆತ್ಮನೇ ಆತ್ಮನ ಗುಣಗಳನ್ನೂ ಕರ್ಮಗಳ ದೋಷಗಳನ್ನೂ ಹೇಳಬಲ್ಲನು. ಉಳಿದವರಿಗೆ ಸಾಧ್ಯವೇ ?

ಬೆರಸಿಟ್ಟ ನೀರು ಪಾಲ-।
ನ್ನಲಸದೆ ಹಂಸೆಗಳು ಪಾಲನೆಳಕೊಳ್ಳುವವೋಲ್ ॥
ಪಿರಿದಪ್ಪ ಶಾಸ್ತ್ರದಿಂದಲೆ ।
ಪರಮಾತ್ಮನ ಗುಣವನರಿವನುತ್ತಮಪುರುಷಂ ॥ ೫೬ ॥

ಹಾಲು ಮತ್ತು ನೀರನ್ನು ಬೆರೆಸಿಟ್ಟರೆ ಹೇಗೆ ಹಂಸಪಕ್ಷಿಯು ಹಾಲನ್ನೇ ಸ್ವೀಕರಿಸುವುದೋ ಅದೇ ರೀತಿಯಾಗಿ ಅನೇಕ ಪ್ರಕಾರವಾದ ಶಾಸ್ತ್ರದಿಂದ ತನ್ನ ಪರಮಾತ್ಮನ ಸ್ವರೂಪವನ್ನು ತಿಳಿಯುವವನೇ ಉತ್ತಮ ಪುರುಷನು.

ಸದ್ದರ್ಶನ ಸದ್ಜ್ಞಾನಂ ।
ಶುದ್ಧದ ಚಾರಿತ್ರ ಮೂರುಮಾತ್ಮನ ರೂಪಂ ॥
ಇದ್ದತಿಶಯ ಪರಿಣಾಮದ ।
ವೃದ್ಧಿಯ ನುಡಿದಾಗ ಮೂರು ಭೇದಮುಮಕ್ಕುಂ ॥ ೫೭ ॥

ಎಲೈ ಭವ್ಯನೇ! ಸಮ್ಯಗ್ದರ್ಶನ, ಜ್ಞಾನ. ಚಾರಿತ್ರ ಇವುಗಳು ಆತ್ಮನ ನಿಜಸ್ವರೂಪಗಳಾಗಿವೆ. ಆಯಾಯ ಪರಿಣಾಮಗಳ ಕಲ್ಪನೆಯಿಂದ ಈ ಮೂರು ಭೇಧಗಳಾಗುವುದಲ ದೆ ಯಥಾರ್ಥವಾಗಿ ಆತ್ಮನು ಸಚ್ಚಿದಾನಂದಮಯನಾಗಿರುವನು.

ನಿರುಪಮ ಸಂವರೆ ನಿರ್ಜರೆ-।
ಯುರುತರ ಮೋಕ್ಷಂಗಳೆಂಬ ಮೂರುಂ ಜೀವನ ॥
ಪರಿಣಾಮಮೊಂದರಲ್ಲಿಯೇ ।
ಯಿರುತಿರ್ಪವು ನುಡಿಗೆ ಮೂರು ಭೇದಮುಮಕ್ಕುಂ ॥ ೫೮ ॥

ಎಲೈ ಭವ್ಯನೇ! ಉತ್ಕೃಷ್ಟವಾದ ಸಂವರೆ, ನಿರ್ಜರೆ ಮತ್ತು ಮೋಕ್ಷ ಈ ಮೂರು ತತ್ತ್ವಗಳೂ ಆತ್ಮನ ಪರಿಣಾಮದಿಂದಲೇ ಉಂಟಾಗತಕ್ಕವುಗಳು. ಅಂದರೆ ಕರ್ಮಗಳ ಬರುವಿಕೆಯನ್ನು ತಡೆಯುವುದಕ್ಕೆ ಸಂವರೆಯೆನ್ನುತ್ತಾರೆ. ಹಿಂದೆ ಆತ್ಮನಿಗೆ ಅಂಟಿದ ಕರ್ಮಗಳನ್ನು ನಾಶ ಮಾಡುವುದಕ್ಕೆ ನಿರ್ಜರೆ ಎಂದೂ ಸಂಪೂರ್ಣವಾದ ಕರ್ಮಗಳ ಕ್ಷಯಕ್ಕೆ ಮೋಕ್ಷವೆಂದೂ ಹೇಳುತ್ತಾರೆ. ಈ ಮೂರು ಕಾರ್ಯಗಳೂ ಕೇವಲ ತನ್ನ ಆತ್ಮನ ಪರಿಣಾಮದಿಂದಲೇ ಉಂಟಾಗುವುವು. ಆದರೆ ಮಾತಿನಲ್ಲಿ ಹೇಳುವಾಗ ಮಾತ್ರ ಮೂರು ಭೇದಗಳಾವುವು.

ಆ ಪರಿಣಾಮದ ಸಾಧಿಸಿ ।
ಪಾಪಂ ಪುಣ್ಯಂಗಳೆಂಬ ಕರ್ಮವ ನೋಡಿಸಿ ॥
ತಾಪತ್ರಯಂಗಳ ಪಿಂಗಿಸ-।
ಲಾ ಪರಮೋತ್ಕೃಷ್ಟ ಸಿದ್ಧಪದವಿಯೆ ಬಕ್ಕುಂ ॥ ೫೯ ॥

ಎಲೈ ಭವ್ಯನೇ ! ಹಿಂದೆ ಹೇಳಿದ ಸಂವರೆ ಮೊದಲಾದ ಪರಿಣಾಮಗಳನ್ನು ಸಾಧಿಸಿ, ಪುಣ್ಯ ಪಾಪರೂಪವಾದ ಕರ್ಮಗಳನ್ನು ನಾಶಮಾಡಿ ಹುಟ್ಟು-ಮುಪ್ಪು-ಸಾವುಗಳೆಂಬ ತಾಪತ್ರಯಂಗಳಿಂದ ಮುಕ್ತನಾದರೆ ಆಗ ಪರಮೋತ್ಕೃಷ್ಟವಾದ ಸಿದ್ಧ ಪದವಿಯು ಪ್ರಾಪ್ತವಾಗುವುದು.

ವಜ್ರಸ್ತಂಭಸಮಾಕೃತಿ ।
ಹೆಜ್ಜೆಯನೆಡೆಬಿಡದೆ ತಾನು ತನ್ನೊಳು ತನ್ನಿಂ ॥
ಪೂಜ್ಯನು ಮಾಗಿಪ್ಪಾತ್ಮನ ।
ನಿರ್ಜನನಾಗಿರ್ದು ಕಾಣ್ಬ ಮನುಜಗೆ ಮೋಕ್ಷಂ ॥ ೬೦ ॥

ಯಾವನು ವಜ್ರದ ಕಂಭಕ್ಕೆ ಸಮಾನವಾದ ಆಕೃತಿಯುಳ್ಳವನಾಗಿ ಪ್ರತಿ ಸಮಯ ದಲ್ಲಿಯೂ ತಾನು ತನ್ನ ಪರಮಪೂಜ್ಯನಾದ ಆತ್ಮನ ಸ್ವರೂಪದಲ್ಲಿ ಲೀನನಾಗಿ ಏಕಾಂತ ದಲ್ಲಿ ಆತ್ಮನನ್ನು ಭಾವಿಸುತ್ತಾನೆಯೋ ಅವನಿಗೆ ನಿಃಸಂದೇಹವಾಗಿ ಮೋಕ್ಷ ಪ್ರಾಪ್ತಿಯಾಗುವುದು.

ಶಿಲೆಯೊಳು ಮನುಜಾಕಾರಾ ।
ಕಲಿತ ಪ್ರತಿಬಿಂಬದಂತೆ ನಿಶ್ಚಲರೂಪಂ ॥
ಚಲಿಯಿಸದೆ ನಿರ್ಮಲಾತ್ಮನ ।
ನಲಿದುಂ ನೋಡುವರು ಮುಕ್ತಿರಮಣೀ ರಮಣರ್ ॥ ೬೧ ॥

ಮೋಕ್ಷವನ್ನು ಹೊಂದಿದವರು ಶಿಲೆಯಿಂದ ನಿರ್ಮಿತವಾದ ಮನುಷ್ಯಾಕಾರದ ಪ್ರತಿ ಬಿಂಬದಂತೆ ನಿಶ್ಚಲರಾಗಿ, ಪವಿತ್ರನಾದ ತನ್ನ ಆತ್ಮನ ಸ್ವರೂಪವನ್ನು ಆತ್ಯಾನಂದ ದಿಂದ ಸದಾ ಕಾಲ ನೋಡುತ್ತಿರುವರು.

ನಿಃಸಂದೇಹದಿ ತತ್ತ್ವರ-।
ಹಸ್ಯವ ತಿಳಿದವರ ಹೃದಯದಲ್ಲುದಯಿಸುವಾ ॥
ಉತ್ಸಹವೆಯುತ್ಸವಂ ಮಿ ।
ಕ್ಕುತ್ಸವಮದು ಮಿಂದ್ರಜಾಲ ದುಸ್ವಪ್ನಸಮಂ ॥ ೬೨ ॥

ಎಲೈ ಭವ್ಯನೇ! ಯಾರು ಸಂದೇಹವಿಲ್ಲದವರಾಗಿ ತನ್ನ ಆತ್ಮತತ್ತ್ವದ ರಹಸ್ಯ ವನ್ನು ತಿಳಿಯುವರೋ ಅವರಿಗಾಗುವ ಆನಂದವೇ ಪರಮಾನಂದವು. ಮಿಕ್ಕುಳಿದ ಸಂಸಾರ ಜನ್ಯವಾದ ಆನಂದಗಳು ಇಂದ್ರಜಾಲ ಮತ್ತು ಸ್ವಪ್ನಕ್ಕೆ ಸಮಾನವಾದು ವುಗಳು. ಅಂದರೆ ಕ್ಷಣಿಕವೆಂದರ್ಥ.

ಖ್ಯಾತಿಯು ಪೂಜೆಯು ಲಾಭದ ।
ಮಾತನು ಚಿಂತಿಸದೆ ತನ್ನ ನಿರ್ಮಲಗುಣಮಂ ॥
ಪ್ರೀತಿಯೊಳು ಧರಿಸುವಾತನ ।
ಮಾತೇನಿಂದ್ರಾದಿಸುರರು ವಂದಿಸುತಿಹರುಂ ॥ ೬೩ ॥

ಎಲೈ ಭವ್ಯನೇ! ಯಾರು ಕೀರ್ತಿ, ಪೂಜೆ ಮತ್ತು ಲಾಭ ಇವುಗಳನ್ನು ಅಪೇಕ್ಷಿಸದೇ ಪರಮ ಪವಿತ್ರನಾದ ತನ್ನ ಆತ್ಮನ ಗುಣ (ಆತ್ಮಧ್ಯಾನ) ದಲ್ಲಿ ಅತ್ಯಂತ ಪ್ರೀತಿಯಿಂದ ಮಗ್ನರಾಗಿರುವರೋ ಅಂಥವರನ್ನು ಇಂದ್ರಾದಿ ದೇವತೆಗಳೂ ವಂದಿಸುವರು.

ತನು ಬೇರಾತ್ಮನು ಬೇರೆಂ- ।
ದನವರತಂ ನಡವ ನುಡಿವ ಪಡಗರದೆಡೆಯೊಳ್ ॥
ಮನದೊಳ್ ಚಿಂತಿಸುವಾತನ ।
ಘನತರ ಕರ್ಮಗಳಿಗೆಲ್ಲ ನಿರ್ಜ್ಜರೆಯುಕ್ಕುಂ ॥೬೪॥

ಎಲೈ ಭವ್ಯನೇ! ಯಾರು ಈ ಶರೀರ ಬೇರೆ. ಆತ್ಮನು ಬೇರೆ ಎಂಬುದಾಗಿ ನಡೆಯು ವಾಗ, ನುಡಿಯುವಾಗ. ಸಂತೋಷದಲ್ಲಿರುವಾಗ ಪ್ರತಿಯೊಂದು ಸಮಯದಲ್ಲಿಯೂ ನಿರ್ಮಲ ಮನಸ್ಸಿನಿಂದ ಚಿಂತಿಸುತ್ತಾನೆಯೋ ಅವನಿಗೆ ಘೋರವಾದ ಕರ್ಮಗಳ ಸಮೂಹವೂ ಶೀಘ್ರವಾಗಿ ನಾಶವಾಗುವುವು.

ಪಿರಿದಪ್ಪಾಸ್ರವ ಸಂವರ- ।
ಮುರು ನಿರ್ಜ್ಜರೆ ಕರ್ಮಬಂಧಮೆಂಬಿವು ತನಗಂ ॥
ಅರಿಯಲಶಕ್ಯಂ ಭವದೊಳ- ।
ಗನವರತಂ ಬರ್ಕ್ಕುಮದನು ಜಿನನೇ ಬಲ್ಲಂ ॥೬೫॥

ಎಲೈ ಆತ್ಮನೇ! ಈ ಸಂಸಾರದಲ್ಲಿ ನಮಗೆ ಬಹುತರವಾಗಿ ಕರ್ಮಗಳ ಆಸ್ರವ, ಬಂಧ, ಸಂವರ ಮತ್ತು ನಿರ್ಜರೆ ಇವುಗಳು ಪ್ರತಿ ಸಮಯದಲ್ಲಿಯೂ ಆಗುತ್ತಿರು ವುವು. ಅವುಗಳನ್ನು ನಾವು ತಿಳಿಯಲಾರೆವು. ಸರ್ವಜ್ಞನಿಗೆ ಮಾತ್ರ ಅವು ಗೋಚರವಾಗುವುವು.

ಜ್ಞಾನಿಗಳಾದ ಜನಂಗಳು ।
ನಾನಾಶಾಸ್ತ್ರಗಳ ತಿಳಿವ ಕಾಲದೊಳಿಲ್ಲಂ ॥
ಜ್ಞಾನದೊಳಗೇಕದೇಶಂ ।
ತಾನಾಗಿಹರೆಲ್ಲ ತತ್ತ್ವಭೇದಗಳಿಂದಂ ॥೬೬॥

ಎಲೈ ಭವ್ಯನೇ ಸುಜ್ಞಾನಿಗಳಾದವರು ನಾನಾ ವಿಧವಾದ ಶಾಸ್ತ್ರವನ್ನು ತಿಳಿಯುವ ಸಮಯಲ್ಲಿ ತನ್ನ ಜ್ಞಾನದ ಒಂದು ಭಾಗವಾಗಿರುವ, ಅಂದರೆ ಜ್ಞಾನಕ್ಕೆ ಗೋಚರ ವಾಗುವ ಸಮಸ್ತ ತತ್ತ್ವಗಳನ್ನೂ ತಿಳಿಯುವರು.

ಎಲ್ಲಾ ಭವ್ಯಜನಂಗಗಳು ।
ಸಲ್ಲೀಲೆಯೊಳಿದನು ತಿಳಿದು ನಡೆಯಲ್ ಪೇಳ್ದೆಂ ॥
ಸಲ್ಲಲಿತ ಹೊಸತುಗನ್ನಡ- ।
ಮಲ್ಲದೆ ಕಷ್ಟಂಗಳಾದ ಭಾಷೆಗಳಿಲ್ಲಂ ॥೬೭॥

ಎಲ್ಲಾ ಭವ್ಯಜನರು ಇದನ್ನು ತಿಳಿದು ಇದರಂತೆ ಆಚರಿಸಬೇಕೆಂದು ಕಷ್ಟಕರವಾದ ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಇದನ್ನು ಪೇಳದೆ ಅತ್ಯಂತ ಸುಲಭವಾದ ಹೊಸ ಕನ್ನಡದಿಂದಲೇ ಹೇಳಿರುವೆನು.

ಶಬ್ದಂಗಳೆಂಬುವೆಲ್ಲವು ।
ಲಬ್ಧವ್ಯಾಕರಣ ಕಾಲಕಳೆಯುಲ್ಕಕ್ಕುಂ ॥
ಲಬ್ಧಿಯುಂ ತಾಂ ಬಂದಲ್ಲದೆ ।
ಶಬ್ದಗಳಿಂ ಮೋಕ್ಷಮಾರ್ಗಮುಕ್ಕುಮೆ ಜಗದೊಳ್ ॥ ೬೮ ॥

ಎಲೈ ಭವ್ಯನೇ! ಶಬ್ದಗಳೆಂಬುದು ಎಲ್ಲವೂ ಒಂದೇ. ಆದರೆ ಕೇವಲ ವ್ಯಾಕರಣ ಪರಿಶ್ರಮದಿಂದ ಕಾಲಹರಣ ಮಾಡುವುದರಿಂದೇನಂ ಪ್ರಯೋಜನ? ಲೋಕದಲ್ಲಿ ಜ್ಞಾನದಿಂದ ಮೋಕ್ಷವಾಗುವುದಲ್ಲದೆ ಶಬ್ದಗಳಿಂದ ಆಗುವುದಿಲ್ಲ. ಭಾಷೆಗಳಿಂದಲೂ ಆಗಲಾರದು.

ಒಂದು ಕ್ಷಣ ಕುಳಿತಾದೊಡೆ ।
ನಿಂದಾದೊಡೆ ಶುದ್ಧತತ್ತ್ವಮಂ ಚಿಂತಿಸುವಂ ॥
ಮಂದನು ಜಡನಾದೊಡೆಯೆಂ- ।
ದೆಂದೆಂದಿಗು ಕೆಡದ ಸೌಖ್ಯ ತಪ್ಪದೆ ಬಕ್ಕುಂ ॥ ೬೯ ॥

ಎಲೈ ಭವ್ಯನೇ! ಬುದ್ಧಿಹೀನನಾಗಿರಲಿ ಅಥವಾ ಆಲಸ್ಯಗಾರನಾಗಿರಲಿ, ಒಂದು ಕ್ಷಣ ಕಾಲ ಕುಳಿತಾಗಲಿ ಅಥವಾ ನಿಂತಾಗಲಿ ಪರಿಶುದ್ಧವಾದ ತನ್ನ ಆತ್ಮತತ್ತ್ವವನ್ನು ಚಿಂತಿಸಿದರೆ ಶಾಶ್ವತವಾದ ಅನಂತಸುಖವು ಅವಶ್ಯವಾಗಿ ಪ್ರಾಪ್ತವಾಗುವುದು.

ಈ ಸಂಸಾರದೊಳೆಂದುಂ ।
ಮೋಸದೊಳಿಹ ಜೀವ ನರಕ ಮೊದಲಾದವರೋಳ್ ॥
ಲೇಸಂ ಕಾಣದೆ ದುಃಖದೊ-॥
ಳೇಸೇಸುಂ ಕಾಲ ತೊಳಲ್ವನಪ್ಪನಜಸ್ರಂ ॥ ೭೦ ॥

ಎಲೈ ಭವ್ಯನೇ! ಈ ಸಂಸಾರದಲ್ಲಿ ಜೀವನು ಮೋಹನೀಯ ಕರ್ಮದಿಂದ ವಂಚಿತನಾಗಿ, ನರಕ ಮೊದಲಾದ ದುರ್ಗತಿಗಳಲ್ಲಿ ಸುಖವಿಲ್ಲದವನಾಗಿ ಬಹುಕಾಲ ತೊಳಲುತ್ತಾ ಸದಾ ದುಃಖವನ್ನು ಅನುಭವಿಸುತ್ತಿರುವನು.

ಹರಿಸಿ ಕಷಾಯಂಗಳ ತಾ-।
ನಿರುಳಾದೊಡಮಹದೊಳಾದೊಡಂ ನಿಜರೂಪಂ ॥
ಮರಳಿಯುಂ ಮರಳಿಯುಂ ಮರೆಯದೆ ।
ನಿರಂತರಂ ಧ್ಯಾನ ಮಾಳ್ಪ ಜೀವನು ಮುಕ್ತಂ ॥ ೭೧ ॥

ಎಲೈ ಭವ್ಯನೇ! ಸಮಸ್ತವಾದ ಕ್ರೋಧಾದಿಭಾವಗಳನ್ನು ನಾಶಮಾಡಿ ರಾತ್ರಿಯಲ್ಲಾಗಲಿ, ಹಗಲಲ್ಲಾಗಲಿ, ತನ್ನ ಪರಮಾತ್ಮನ ಸ್ವರೂಪವನ್ನು ಮರೆಯದೆ ಬಾರಿಬಾರಿಗೂ ಯಾವಾಗಲೂ ಚಿಂತಿಸುವವನು ಮುಕ್ತನಾಗುವನು.

ಸಂಪೂರ್ಣ ಚಂದ್ರಮಂಡಲ ।
ಸಂಪತ್ತುಂ ಮಾಳ್ಪ ರಸಿಕ ಪುರುಷನ ತೆರದಿಂ ॥
ಕೆಂಪಾದ ಹೊನ್ನು ಮಣ್ಣಿನ ।
ಲಂಪಟಮಂ ಬಿಟ್ಟು ನಿಜವ ಕಾಣ್ಬುದು ನಿಚ್ಚಂ ॥ ೭೨ ॥

ಎಲೈ ಭವ್ಯನೇ! ಲೋಕದಲ್ಲಿ ಹುಣ್ಣಿಮೆ ಚಂದ್ರನು ರಸಿಕರಾದವರಿಗೆ ಹೇಗೆ ಸಂತೋಷ ವನ್ನೀಯುವನೋ, ಅದೇ ಪ್ರಕಾರವಾಗಿ ಹೊನ್ನು, ಮಣ್ಣು, ಧನ-ಧಾನ್ಯ ಮೊದ ಲಾದ ವಸ್ತುಗಳ ಆಸೆಯನ್ನು ತ್ಯಜಿಸಿದ ಪರಮಾತ್ಮ ಧ್ಯಾನಿಗೆ ಪರಮಾನಂದವಾಗು ವುದು. ಆದುದರಿಂದ ಪರಮಾತ್ಮ ಧ್ಯಾನವನ್ನು ನಿತ್ಯ ಮಾಡತಕ್ಕದ್ದು.

ಆದಿತ್ಯಕೋಟಿ ದೀಧಿ ।
ಈ ದೇಹದೊಳಿರ್ಪನಾತ್ಮನಾತನ ಕಿರಣಕೆ ॥
ಮೇದಿನಿಯ ಮನೆಯ ಭಿತ್ತಿಯೊ-।
ಳಾದ ಗವಾಕ್ಷಂಗಳಂತೆ ಪಂಚೇಂದ್ರಿಯಂಗಳ್ ॥ ೭೩ ॥

ಎಲೈ ಭವ್ಯನೇ! ಈ ಶರೀರದಲ್ಲಿ ಕೋಟಿಸೂರ್ಯರಂತೆ ಪ್ರಭೆಯುಳ್ಳ ಪರಮಾತ್ಮನು ವಿರಾಜಮಾನನಾಗಿರುವನು. ಲೋಕದಲ್ಲಿ ಹೇಗೆ ಮನೆಯ ಒಳಗೆ ಪ್ರಕಾಶ ಬರುವರೇ ಗೋಡೆಯಲ್ಲಿ ಕಿಟಕಿಗಳಿರುವುವೋ ಅದೇ ರೀತಿಯಲ್ಲಿ ತನ್ನ ಆತ್ಮನ ಕಿರಣಗಳ ಪ್ರಸಾರಕ್ಕೆಪಂಚೇಂದ್ರಿಯಗಳು ಕಿಟಕಿಗಳಂತಿರುವುವು.

ಉಪಮಾತೀತ ಸುಖಾರ್ಣವ-।
ಮಪವರ್ಗಮುಮಾತ್ಮನಲ್ಲದನ್ಯಮುಮಿಲ್ಲಂ ॥
ತಪಮಾತ್ಮರೂಪಮುಕ್ಕುಂ ।
ಕಪಟತಪಂ ಹಲವು ಬಾಹ್ಯ ತಪಗಳುಮುಕ್ಕುಂ ॥ ೭೪ ॥

ಎಲೈ ಭವ್ಯನೇ! ಉಪಮೆ ಇಲ್ಲದ ಅನಂತ ಸುಖವುಳ್ಳ ಮೋಕ್ಷವು ಆತ್ಮನಿಗೆ ಪ್ರಾಪ್ತಿ ಯಾಗುವುದು. ಆ ಮೋಕ್ಷವು ಆತ್ಮಮಯವಾಗಿರುವುದು. ತಪಸ್ಸೆಂಬುದು ಆತ್ಮನ ಸ್ವರೂಪವಾಗಿದೆ. ಕಪಟರೂಪವಾದ ಕೆಲವು ತಪಸ್ಸುಗಳು ಮಿಥ್ಯಾರೂಪವಾಗಿದೆ.

ಪಟ್ಟಣ-ಮಸಣಂ ಜ್ಞಾನಿಗೆ ।
ಬೆಟ್ಟಗಳರಮನೆಯುಮಾತ್ಮಭಾವನೆಯುಕ್ಕುಂ ॥
ಪಟ್ಟದ ವನಿತೆ ಕುಮಾರಂ ।
ಪುಟ್ಟದ ಚಾರಿತ್ರ ಮಂತ್ರಿ ಸಮ್ಯಗ್ಜ್ಞಾನಂ ॥ ೭೫ ॥

ಎಲೈ ಭವ್ಯನೇ! ತನ್ನ ಆತ್ಮಜ್ಞಾನವುಳ್ಳ ಸತ್ಪುರುಷರಿಗೆ ಮಸಣವು ಪಟ್ಟಣವಾಗಿಯೂ ಬೆಟ್ಟಗಳು ಅರಮನೆಯಾಗಿಯೂ, ಆತ್ಮಭಾವನೆಯು ಪಟ್ಟಸ್ತ್ರೀಯಾಗಿಯೂ, ಚಾರಿತ್ರ ವು ಯುವರಾಜನಿಗೆ ಸಮನಾಗಿಯೂ, ಸಮ್ಯಗ್‌ಜ್ಞಾನವು ಮಂತ್ರಿಯಂತೆಯೂ ಇರು ವುವು.

ಚತುರಂಗ ಸೈನ್ಯವಾಗಲ್ ।
ವ್ರತ-ಗುಣ-ಶೀಲೋದ್ಘಧರ್ಮವಿಂತಾ ಪ್ರಭುವಿಂ- ॥
ಗತಿಶತ್ರು ಮೋಹರಾಜಂ ।
ಹತನಾಗಿಯೆ ಕೆಟ್ಟು ಪೋಗದಿರ್ಪನೆ ಬೇಗಂ ॥೭೬॥

ಅಹಿಂಸಾದಿ ವ್ರತಗಳು. ಸಮ್ಯಗ್ದರ್ಶನಾದಿ ಗುಣಗಳು, ಸಪ್ತಶೀಲಗಳು ಹಾಗೂ ದಶಧರ್ಮಗಳು ಎಂಬ ಚತುರಂಗ ಸೈನ್ಯವುಳ್ಳ ಆತ್ಮನೇ ರಾಜನಾಗಿರಲು ಮೋಹನೀಯ ಕರ್ಮವೆಂಬ ಶತ್ರುರಾಜನು ಶೀಘ್ರ ನಾಶವಾಗಿ ಹೋಗಲಾರನೇ? ಅಂದರೆ ಕರ್ಮಕ್ಷಯವಾಗುವುದು ಎಂದರ್ಥ.

ಗಣನಾತೀತ ಮನೋಹರ ॥
ಗುಣರತ್ನಾಭರಣ ಭೂಷಿತಾತ್ಮನ ಚಿಂತಿಪ ॥
ಮನುಜಗೆ ಸಮನಾರ್ ಜಗದೊಳ- ।
ಗಿನನಿಗೆ ಸಮನಾಗಿ ಬೆಳಗುವನ್ಯರುಮೊಳರೇ ॥೭೭॥

ಎಲೈ ಭವ್ಯನೇ! ಯಾವನ ಗುಣಗಳು ಅಪಾರವಾಗಿವೆಯೋ ಮತ್ತು ಯಾವನು ಅತ್ಯಂತ ಮನೋಹರನೋ ಅಂತಹ ರತ್ನತ್ರಯಾಭರಣಭಯೊಷಿತನಾದ ಪರಮಾತ್ಮ ನನ್ನು ಭಾವಿಸುವವನಿಗೆ ಯಾರೂ ಸರಿಯಾಗಲಾರರು. ಹೇಗೆ ಮೂಜಗ ಪ್ರಕಾಶ ಕನಾದ ಸೂರ್ಯನಿಗೆ ಯಾರೂ ಸರಿಯಾಗಲಾರರೋ ಅದೇ ರೀತಿಯಲ್ಲಿ ಅವನಿಗೆ ಯಾರೂ ಸರಿಸಮಾನರಾಗಲಾರರು.

ಅತಿಸೂಕ್ಷ್ಮಮಗುರುಲಘುವುನಂ ।
ಮತಿಯುತ ಕೈವಲ್ಯಬೋಧ ದರ್ಶನಯುಕ್ತಂ ॥
ಮಿತಿಮೀರಿದಾತ್ಮವೀರ್ಯಂ ।
ರತಿಯಿಂ ಸಂಸಾರದೊಳಗೆ ತನ್ನನೆ ಕಾಣಂ ॥೭೮॥

ಎಲೈ ಭವ್ಯನೇ ! ಪರಮಾತ್ಮನಲ್ಲಿ ಅನಂತಜ್ಞಾನ, ಅನಂತದರ್ಶನ, ಅನಂತ-ವೀರ್ಯ, ಅನಂತಸುಖ, ಸೂಕ್ಷ್ಮತ್ವ, ಅಗುರುಲಘುತ್ವ ಇವೇ ಮೊದಲಾದ ಗುಣಗಳಿರುವುವು. ಆದರೆ ಸಂಸಾರದಲ್ಲಿರುವಾಗ ಆ ಗುಣಗಳು ಪ್ರಕಟವಾಗಲಾರವು.

ಸತ್ಯಜ್ಞಾನದ ಬಲದಿಂ ।
ನಿತ್ಯಾನಂದೈಕರೂಪ ಚಿನ್ಮಯುನನಘಂ ॥
ಪ್ರತ್ಯಕ್ಷಮಾಗೆ ಮನುಜಗೆ ।
ಸತ್ಯಂ ತಾಂ ಮೂರು ಭವಕೆ ಮುಕ್ತನೆಯಕ್ಕುಂ ॥೭೯॥

ಎಲೈ ಭವ್ಯನೇ! ಸಮ್ಯಗ್‌ಜ್ಞಾನದ ಬಲದಿಂದ ಸದಾ ಆನಂದ ಸ್ವರೂಪನಾದ ಮತ್ತು ಚಿನ್ಮಯನಾದ ಪರಮಾತ್ಮನ ಸಾಕ್ಷಾತ್ಕಾರವಾಗುವುದು. ಆಗ ಆತನಿಗೆ ನಿಃಸಂದೇಹವಾಗಿ ಮೂರು ಭವದೊಳಗೆ ಮೋಕ್ಷಪ್ರಾಪ್ತಿಯಾಗುವುದು.

ಶಾಂತರಸ ಭರಿತಚಿತ್ತಂ ।
ಕಾಂತಾರದೊಳಿರ್ದು ನಿಜವ ನೋಡಿದೊಡಾತಂ ॥
ಭ್ರಾಂತಿಕಾರ ಘೋರ ಸಂಸೃತಿ ।
ಕಾಂತಾರವ ದಾಂಟಿ ಮುಕ್ತಿಸುಖವನೆ ಪಡೆವಂ ॥೮೦॥

ಎಲೈ ಭವ್ಯನೇ ! ಯಾವನು ಶಾಂತವಾದ ಪರಿಣಾಮದಿಂದ ಕೂಡಿದವನಾಗಿ ಅರಣ್ಯ ಮೊದಲಾದ ಏಕಾಂತ ಸ್ಥಳದಲ್ಲಿದ್ದು ತನ್ನ ಪರಮಾತ್ಮಧ್ಯಾನವನ್ನು ಮಾಡುತ್ತಾನೆಯೋ ಅವನು ಮೋಹವನ್ನುಂಟುಮಾಡುವ ಈ ಘೋರವಾದ ಸಂಸಾರದಿಂದ ಪಾರಾಗಿ ಮುಕ್ತಿಸುಖವನ್ನು ಪಡೆಯುವನು.

ಮದಸೊಕ್ಕಿದಾನೆ ಬರುತಿರ- ।
ಲೆದುರಾಗದೆ ಪೋಪ ವೃದ್ಧಸಂಘದ ತೆರದೊಳ್ ॥
ಹೃದಯದೊಳು ನಿರ್ಮಲಾತ್ಮನ ।
ಮುದದಿಂ ಭಾವಿಸುವನೆದುರು ನಿಲ್ಲದು ಪಾಪಂ ॥೮೧॥

ಎಲೈ ಭವ್ಯನೇ! ಮದವೇರಿದಾನೆಯು ಎದುರಾಗಿ ಬಂದರೆ ಹೇಗೆ ವೃದ್ಧರು ದೂರ ಸರಿದು, ಬದಿಯಲ್ಲಿರುವರೋ ಅದೇ ಪ್ರಕಾರ ಹೃದಯದಲ್ಲಿ ಪರಮಾತ್ಮನನ್ನು ಸಂತೋಷದಿಂದ ಭಾವಿಸುವವನ ಎದುರಿನಲ್ಲಿ ಪಾಪವು ನಿಲ್ಲಲಾರದು.

ಉಪವಾಸಮೇಕಭುಕ್ತಂ ।
ತಪಮುಂ ವ್ರತ-ಶೀಲ-ಸಂಯಮಾದಿಗಳೆಲ್ಲಂ ॥
ಅಪವರ್ಗಾನಂದಪ್ರದ
ವಿಪುಲಾತ್ಮ ಧ್ಯಾನವೊಂದರಲ್ಲಿಯೆ ಬಕ್ಕುಂ ॥೮೨॥

ಎಲೈ ಭವ್ಯನೇ! ಉಪವಾಸ, ಏಕಭುಕ್ತ, ತಪಸ್ಸು, ವ್ರತ, ಶೀಲ ಮತ್ತು ಸಂಯಮ ಮೊದಲಾದವುಗಳು ಮೋಕ್ಷಪ್ರದವಾದ ತನ್ನ ಪಾವನ ಆತ್ಮಧ್ಯಾನ ಒಂದರಿಂದಲೇನೇ ಉಂಟಾಗುವುದು.

ಪದಿನಾಲ್ಕು ಗುಣಸ್ಥಾನಂ ।
ಪದಿನಾಲ್ಕುಂ ಮಾರ್ಗಣೆಗಳು ಜೀವಸ್ಥಾನಂ ॥
ಉದಯಮುದೀರಣ ಸತ್ವಂ ।
ಮೊದಲಾದುವು ಪುದ್ಗಲಗಳೊಳಾತ್ಮಕಿಲ್ಲಂ ॥೮೩॥

ಎಲೈ ಭವ್ಯನೆ! ಮಿಥ್ಯಾತ್ವ, ಸಾಸಾದನ, ಅವಿರತ, ದೇಶವಿರತ, ಪ್ರಮತ್ತ, ಅಪ್ರಮತ್ತ, ಅಪೂರ್ವಕರಣ. ಅನಿವೃತ್ತಿಕರಣ. ಸೂಕ್ಷ್ಮಸಾಂಪರಾಯ, ಉಪಶಾಂತಕಷಾಯ, ಕ್ಷೀಣಕಷಾಯ, ಸಯೋಗಿಕೇವಲಿ ಮತ್ತು ಅಯೋಗಿ ಕೇವಲಿಗಳೆಂಬ ಹದಿನಾಲ್ಕು ಗುಣಸ್ಥಾನಗಳೂ ಗತಿ, ಇಂದ್ರಿಯ. ಕಾಯ ಮೊದಲಾದ ಮಾರ್ಗಣಸ್ಥಾನಗಳೂ ಸೂಕ್ಷ್ಮ. ಏಕೇಂದ್ರಿಯ ಬಾದರೇ ಕೇಂದ್ರಿಯ ಮೊದಲಾದ ಹದಿನಾಲ್ಕು ಜೀವಸಮಾಸಗಳೂ ಕರ್ಮಗಳ ಉದಯವೂ ಕರ್ಮಗಳ ನಾಶವೂ ಕರ್ಮಗಳ ಸತ್ವ (ಅಸ್ತಿತ್ವ)ವೂ ಇವು ಮೊದಲಾದವುಗಳ ಪುದ್ಗಲಗಳ ಸಂಬಂಧದಿಂದ ಉಂಟಾಗುವುವು. ಪರಿಶುದ್ಧನಾದ ಆತ್ಮನಿಗೆ ಅವು ಉಂಟಾಗಲಾರವು.

ಒಡೆಯಂ ಬಂಟಂ ಧನಿಕಂ ।
ಬಡವಂ ಸ್ತ್ರೀ ಪುರುಷ ಷಂಡ ಸುರ ನರ ತಿರಿಕರ್ ।
ನಡೆ ನುಡಿ ಮೊದಲಾದೆಲ್ಲವು ।
ಮೊದಳೊಳಗಿಹ ಕರ್ಮದುದಯುವಶಾತ್ಮಂಗಿಲ್ಲಂ ॥ ೮೪ ॥

ಎಲೈ ಭವ್ಯನೇ! ಕರ್ಮದ ಉದಯದಿಂದ ಒಡೆಯ, ಸೇವಕ, ಧನಿಕ, ಬಡವ, ಸ್ತ್ರೀ, ಪುರುಷ, ನಪುಂಸಕ, ದೇವ, ಮನುಷ್ಯ ಮತ್ತು ತಿರ್ಯಂಚ ನಡೆ, ನುಡಿ ಮುಂತಾದುವು ಉಂಟಾಗುವುವು. ಆದರೆ ಆತ್ಮನಿಗೆ ಇದರೊಡನೆ ಕಿಂಚಿತ್ತೂ ಸಂಬಂಧವಿಲ್ಲ.

ಸಮರಸಭರ ಭರಿತಾನಘ ।
ವಿಮಲಾತ್ಮಾನಂದ ಬಂಧುರೋದಯ ಬುಧರಿಗೆ ॥
ಯಮಧರ್ಮ ಮೋಹರಾಜಂ ॥
ಕಮಲಾಯುಧರೆಲ್ಲ ಬೆದರಿಯುದುರುತ್ತಿರ್ಪರ್ ॥ ೮೫ ॥

ಎಲೈ ಭವ್ಯನೇ! ಶಾಂತಸ್ವರೂಪರಾದ, ಕರ್ಮಮಲರಹಿತರಾದ ಅತ್ಯಂತ ನಿರ್ಮಲ ಮತ್ತು ಆನಂದಮಯರಾದ ಸತ್ಪುರುಷರಿಗೆ ಯಮರಾಜ, (ಮರಣ) ಮೋಹರಾಜ (ಕರ್ಮಶತ್ರು) ಮನ್ಮಥ ಇವರೆಲ್ಲ ಬೆದರಿ ನಾಶವಾಗುವರು.

ಚಿದ್ರೂಪ ವೀತರಾಗಾ-।
ಮಂದಾನಂದಾಬ್ಧಿ-ಪೂರವೊಂದೇ ಸುಖದಂ ।
ಪದಪಿಂ ಬಹುವಿಧ ಬುದ್ಧಿಯ ।
ಮೊದವಿಕೆ ಖದ್ಯೋತಸಂಗಿ ಗೀಜಗನಂದಂ ॥ ೮೬ ॥

ಎಲೈ ಭವ್ಯನೇ! ಜ್ಞಾನಮಯನಾದ ವೀತರಾಗನೇ ಪರಮಾನಂದ ಸಾಗರವೆಂಬ ಉತ್ತಮ ಸುಖವನ್ನು ನಮಗೆ ಕೊಡುತ್ತಾನೆ. ಬಾಕಿ ಉಳಿದ ಈ ಸಂಸಾರ ಸಂಬಂಧವಾದ ಅನೇಕ ಸುಖಗಳು ಮಿಣುಕು ಹುಳದ ಬೆಳಕಿನಂತೆ, ಗುಬ್ಬಚ್ಚಿ ಹಕ್ಕಿಯಂತೆ, ಅಲ್ಪವಾದ ಆನಂದವನ್ನು ಕೊಡಬಲ್ಲವು.

ಒಪ್ಪಂ ಬಡೆದ ಮನುಷ್ಯಂ-।
ಗಪ್ಪಾಯೆಂಬಕ್ಕರಂಗಳೆರಡೇ ಸಾಲ್ಗುಂ ॥
ತಪ್ಪದೆಯುದನೇ ಭಾವಿಸು-।
ತಿಪ್ಪವನಿಗೆ ಮೋಕ್ಷಸೌಖ್ಯತಾನೇ ಬಕ್ಕುಂ ॥ ೮೭ ॥

ಎಲೈ ಭವ್ಯನೇ! ಯಾವನು ಏಕಚಿತ್ತನಾಗಿ 'ಆತ್ಮಾ' ಎಂಬ ಎರಡಕ್ಷರವುಳ್ಳ ಪದವನ್ನು ಯಾವಾಗಲೂ ತಪ್ಪದೇ ಭಾವಿಸುತ್ತಾನೆಯೋ ಅವನಿಗೆ ನಿಃಸಂದೇಹವಾಗಿ ಮೋಕ್ಷವು ಪ್ರಾಪ್ತಿಯಾಗುವುದು.

ಅದರತ್ತಣಿಂದ ಸುಲಭದ ।
ಪೆಸರಿದುವೋಂಕಾರವೆಂಬುದೊಂದಕ್ಕರಮುಂ ॥
ಹೃದಯ-ಧ್ಯಾನದೊಳಿದ್ದರೆ ।
ಯುವರರ್ಥಂ ಮುಕ್ತಿಯುಧರ-ಸುಧೆಯುಂ ಸವಿವಂ ॥ ೮೮ ॥

ಎಲೈ ಭವ್ಯನೇ! 'ಆತ್ಮಾ' ಎಂಬ ಶಬ್ದಕ್ಕಿಂತಲೂ ಅತ್ಯಂತ ಸುಲಭವಾದ 'ಓಂ' ಎಂಬ ಒಂದಕ್ಷರವುಳ್ಳ ಶಬ್ದವನ್ನು ಹೃದಯದಲ್ಲಿ ಧ್ಯಾನಿಸಿದರೆ ಅದರಿಂದಲೂ ಮುಕ್ತಿ ಲಕ್ಷ್ಮಿಯ ಅಧರದ ಅಮೃತವನ್ನು ಪಾನಮಾಡಬಹುದು.

ಮುಚ್ಚಿದ ಮಾಳಿಗೆಯೊಳಗಿಹ ।
ಕತ್ತಲೆಯನ್ನೊತ್ತಿ ನೂಂಕಲಾಗದು ಜನರಿಂ ॥
ಪತ್ತಿಸಿ ದೀಪಮನಿಟ್ಟರೆ ।
ಮುಚ್ಚಿದ ಕತ್ತಲೆಯು ಕಾಲು ಕಿತ್ತೋಡುವುದುಂ ॥ ೮೯ ॥

ಎಲೈ ಭವ್ಯನೇ! ಹೇಗೆ ಮುಚ್ಚುಗೆಯುಳ್ಳ ಮಾಳಿಗೆ ಮನೆಯಲ್ಲಿದ್ದ ಕತ್ತಲೆಯನ್ನು ನಾವು ಎಷ್ಟು ಪ್ರಯತ್ನ ಪಟ್ಟರೂ ಹೋಗಲಾಡಿಸಲಾಗುವುದಿಲ್ಲವೋ ಅಂತಹ ಘೋರವಾದ ಕತ್ತಲೆಯನ್ನೂ ಕೂಡ ದೀಪದ ಪ್ರಕಾಶದಿಂದ ದೂರ ಮಾಡುವಂತೆ ಕರ್ಮದ ಕತ್ತಲೆಯನ್ನು ತನ್ನ ಪರಮಾತ್ಮ ಭಾವನೆಯೆಂಬ ದೀಪದಿಂದ ಹೋಗಲಾಡಿಸಬಹುದು ಎಂದರ್ಥ.

ಕಲ್ಲೊಳು ಹೇಮಮುಮೆಳ್ಳೊಳು ।
ತೈಲಂ ಘೃತ ಹಾಲಿನಲ್ಲಿ ಬೀಜದಿ ವೃಕ್ಷಂ ॥
ಜ್ವಲನಂ ಪುಳ್ಳೆಯೊಳಿಪ್ಪಂ ।
ತೆಲ್ಲಾ ದೇಹದೊಳು ಜೀವನಿರ್ಪಂ ಸತ್ಯಂ ॥ ೯೦ ॥

ಎಲೈ ಭವ್ಯನೇ! ಕಲ್ಲಿನಲ್ಲಿ ಭಂಗಾರವೂ ಎಳ್ಳಿನಲ್ಲಿ ಎಣ್ಣೆಯೂ ಹಾಲಿನಲ್ಲಿ ತುಪ್ಪವೂ ಬೀಜದಲ್ಲಿ ವೃಕ್ಷವೂ ಸೌದೆಯಲ್ಲಿ ಬೆಂಕಿಯೂ ಇರುವಂತೆ ಈ ಶರೀರದಲ್ಲೆಲ್ಲಾ ಜೀವನು ವ್ಯಾಪಿಸಿರುವನು.

ಅತ್ಯಂತ ಕೀಳು ಚಿನ್ನಂ ।
ಮೃತ್ತಿಕೆಯೊಳಗುಪ್ಪುವೆರಸಿ ಪುಟವಿಕ್ಕಲೊಡಂ ॥
ಉತ್ತಮ ವರ್ಣಂ ಬಪ್ಪುದು ।
ತತ್ತ್ವಮಭಾವಿಸಲು ಜೀವ ತಾನಂತಪ್ಪಂ ॥ ೯೧ ॥

ಎಲೈ ಭವ್ಯನೇ! ಅತ್ಯಂತ ಕೀಳಾದ ಕಿರಿದು ಚಿನ್ನವನ್ನು ಮಣ್ಣಿನ ಕಲುಮೆಯಲ್ಲಿ ಪಟಲುಪ್ಪು ಬೆರಸಿ ಪುಟವಿಡಲು ಅದು ಹೇಗೆ ಅಪ್ಪಟವಾದ ಪುತ್ಥಳಿ ಬಂಗಾರವಾಗುವುದೋ ಅದೇ ಪ್ರಕಾರವಾಗಿ ಆತ್ಮತತ್ತ್ವವನ್ನು ಧ್ಯಾನಿಸಿದರೆ ಕರ್ಮಮಲಗಳು ನಾಶವಾಗಿ ಆತ್ಮನು ಪರಿಶುದ್ಧನಾಗುವನು.

ಏನೆಂದರಿಯದ ಜನರಿಗೆ ।
ನಾನಾದೃಷ್ಟಾಂತದಿಂದ ತೋರುವುದುಚಿತಂ ॥
ಜ್ಞಾನಿಯ ಸಂಗದಿ ತಾನ- ।
ಜ್ಞಾನಿಯು ಸುಜ್ಞಾನಿಯಾಗಿ ತನ್ನಂ ಕಾಣ್ಬಂ ॥೯೨॥

ಎಲೈ ಭವ್ಯನೇ! ಆದಕಾರಣದಿಂದ ಆತ್ಮನ ಬಗೆಗೆ ಏನೂ ತಿಳಿಯದವರಿಗೆ ಅನೇಕ ವಿಧ ವಾದ ಉದಾಹರಣೆಗಳನ್ನು ಹೇಳಿ ತಿಳಿಸಿ, ಹೇಳಬೇಕಾಗುವುದು. ಯಾಕೆಂದರೆ, ಜ್ಞಾನಿಗಳ ಸಹವಾಸದಿಂದ ಅಜ್ಞಾನಿಯೂ ಸುಜ್ಞಾನಿಯಾಗಿ ತನ್ನ ಆತ್ಮಸ್ವರೂಪ ವನ್ನು ತಿಳಿಯುವನು.

ಗಣಿಸದೆ ಪುದ್ಗಲ ಮೋಹದಿ ।
ಗುಣಮಣಿಗಳ ಮೂಢಮತಿಯು ಬಳಲುತ್ತಿರ್ಪಂ ॥
ಕ್ಷಣರುಚಿಗಾಸಿಸಿ ದೀಪಮ ।
ಗುಣಹೀನಂ ಕೆಡಿಸುವಂತೆ ಮೋಹಗ್ರಸ್ತಂ ॥೯೩॥

ಎಲೈ ಭವ್ಯನೇ! ಅಜ್ಞಾನಿಯು ತನ್ನ ಯಾವ ಗುಣಗಳನ್ನೂ ಲಕ್ಷ್ಯಕ್ಕೆತಾರದೆ, ಬಾಹ್ಯ ಪರಿಗ್ರಹಗಳಲ್ಲಿ ಮೋಹಿತನಾಗಿ, ಹೇಗೆ ಪತಂಗವು ದೀಪದಲ್ಲಿ ಮೋಹಗೊಂಡು ದೀಪವನ್ನು ಕೆಡಿಸಿ, ತನ್ನ ಪ್ರಾಣವನ್ನು ಕಳಕೊಳ್ಳುವುದೋ ಅದೇ ಪ್ರಕಾರವಾಗಿ ಈ ಸಂಸಾರದಲ್ಲಿ ಅನೇಕ ಕಷ್ಟಗಳನ್ನು ಅನುಭವಿಸುತ್ತಿರುವನು.

ನಾನಾ ರತ್ನಾದಿಗಳಂ ।
ತಾನೇ ಕಡು ಕಷ್ಟಪಟ್ಟು ಗಳಿಸಿದ ಪುರುಷಂ ॥
ತನ್ನನು ತಾನುಂ ಕಂಡೊಡೆ ।
ಕುನ್ನಿಯ ಪಾಲಂತೆಯದನು ಹೇಯಂ ದೂಳ್ಪಂ ॥೯೪॥

ಎಲೈ ಭವ್ಯನೇ! ನಾನಾವಿಧವಾದ ರತ್ನ ಮೊದಲಾದ ಐಶ್ವರ್ಯವನ್ನು ತಾನು ಕಷ್ಟ ಪಟ್ಟು ಸಂಪಾದಿಸಿದ ಮನುಷ್ಯನು, ತನ್ನ ಪರಮಾತ್ಮನ ಸ್ವರೂಪವನ್ನು ತಿಳಿದರೆ, ನಾಯಿಯ ಹಾಲು ಅಪವಿತ್ರವೆಂದು ಹೇಗೆ ತೊರೆಯುತ್ತಾರೆಯೋ, ಅದೇ ರೀತಿ ಯಲ್ಲಿ ಸಕಲ ಐಶ್ವರ್ಯವನ್ನು ತೊರೆಯುವನು.

ನಿಜನ ಸ್ಥಳದೊಳು ಸುಸ್ಥಿರ ।
ನಿಜ ಪರಮಾನಂದ ಬಂಧುರೋತ್ತಮಪುರುಷಂ ॥
ಸುಜನಗಳಲ್ಲದೆ ಯುಳಿದ ।
ಪ್ರಜೆಗಳ ಕಣ್ಗಳಿಗೆ ಮರುಳನೆಂಬಂತಿಹನುಂ ॥೯೫॥

ಎಲೈ ಭವ್ಯನೇ! ಏಕಾಂತ ಸ್ಥಳದಲ್ಲಿ ಸ್ಥಿರಮನಸ್ಕನಾಗಿ ತನ್ನ ಪರಮಾತ್ಮನ ಧ್ಯಾನ ವನ್ನು ಮಾಡುತ್ತಾ ಆನಂದಮಗ್ನನಾದ ಉತ್ತಮ ತ್ಯಾಗಿ ಮನುಷ್ಯನು ಸತ್ಪುರುಷ ರನ್ನು ಬಿಟ್ಟು ಉಳಿದ ಜನರಿಗೆ ಹುಚ್ಚನಂತೆ ಕಾಣುವನು.

ಮಡದಿಯು ಮಕ್ಕಳ ಮಿತ್ರರ ।
ಕಡೆ ನೋಡದೆ ಜಡಿದ ಪಾಪಪಟಲವ ಕೆಡಿಸಲ್ ॥
ನಡು ನಟ್ಟಡವಿಯು ಮಧ್ಯದೊ ।
ಳಿಡೆಯಾಡುವನೊಡಲನೋಡಿಯಂಜುವರೆಬರ್ ॥ ೯೬ ॥

ಎಲೈ ಭವ್ಯನೇ ಆತ್ಮಜ್ಞಾನಿಯು ಹೆಂಡತಿ, ಮಕ್ಕಳು ಮತ್ತು ಮಿತ್ರರ ಕಡೆಗೆ ಲಕ್ಷ್ಯವನ್ನು ಕೊಡದೆ ತನಗೆ ಅಂಟಿದ ಕರ್ಮಸಮೂಹವನ್ನು ನಾಶ ಮಾಡುವುದಕ್ಕೋಸ್ಕರ ಅಡವಿಯಲ್ಲಿ ಸಂಚರಿಸುತ್ತಿರುವನು. ಆತನ ದೇಹ ಸ್ಥಿತಿಯನ್ನು ನೋಡಿ ಅಜ್ಞಾನಿಗಳಾದ ಕೆಲವರು ಹೆದರುವರು.

ಬಿರುಗಾಳಿಗೆದುರು ನಿಲ್ಲವು ।
ಸಾಲಿನ ಮೇಘಗಳುಮಂತೆ ಭೀತಿಯು ಮೂರುಂ ॥
ಕಾಲದೊಳು ಮುನಿಯು ಮುಂಗಡೆ ।
ನಿಲಲಾರದು ಶೀಲಜಾಲಲಾಲಿತಮತಿಯಾ ॥ ೯೭ ॥

ಎಲೈ. ಭವ್ಯನೇ! ಬಿರುಗಾಳಿಯು ಬೀಸಿದಾಗ ಮೋಡಗಳು ಹೇಗೆ ಚದರಿ ಮಾಯವಾಗಿ ಹೋಗುವುವೊ. ಅದೇ ರೀತಿಯಲ್ಲಿ ವ್ರತ, ಶೀಲ, ಉಪವಾಸಾದಿಗಳಿಂದ ಭೂಷಿತನಾದ ಮುನಿಗೆ ಮೂರು ಕಾಲದಲ್ಲಿಯೂ ಭಯವೆಂಬುದು ಉಂಟಾಗಲಾರದು.

ಮೂಲಪ್ರಕೃತಿಗಳೆಂಟುಂ ।
ಮೇಲುತ್ತರ ಪ್ರಕೃತಿ ನೂರನಾಲ್ವತ್ತೆಂಟುಂ ॥
ಲೀಲೆಯೊಳಗುತ್ತರೋತ್ತರ ।
ಮೂಲೋಕ ಪ್ರಮಿತ-ಶುದ್ಧಜೀವನಿಗಿಲ್ಲಂ ॥ ೯೮ ॥

ಎಲೈ ಭವ್ಯನೇ! ಜ್ಞಾನಾವರಣೀಯು. ದರ್ಶನಾವರಣೀಯ ಮೊದಲಾದ ಎಂಟು ಮೂಲಕರ್ಮಪ್ರಕೃತಿಗಳೂ ಇವುಗಳ ಭೇದಗಳಾದ ೧೪೮ ಉತ್ತರ ಪ್ರಕೃತಿಗಳೂ ಹಾಗೂ ಸಂಖ್ಯಾತ, ಅಸಂಖ್ಯಾತ ಮತ್ತು ಅನಂತಭೇದಗಳಾದ ಎಲ್ಲಾ ತರದ ಕರ್ಮಗಳೂ ತನ್ನ ಜ್ಞಾನದಿಂದ ಮೂರು ಲೋಕಗಳನ್ನು ವ್ಯಾಪಿಸಿರುವ ಪರಿಶುದ್ಧನಾದ ಪರಮಾತ್ಮನಿಗೆ ಅಂಟಲಾರವು,

ಸೂರ್ಯನ ಮುಸುಕುವ ಕತ್ತಲೆ ।
ಯಾರುಂ ಕಂಡರಿಯದಂತೆ ತನ್ನಾತ್ಮನೊಳ ॥
ಸಾರವ ತಿಳಿದಂತಾತನ ।
ಸೇರುವ ಕರ್ಮಗಳು ಮೂರು ಲೋಕದೊಳಿಲ್ಲಂ ॥ ೯೯ ॥

ಎಲೈ ಭವ್ಯನೇ! ಹೇಗೆ ಕತ್ತಲೆಯು ಸೂರ್ಯನ ಕಿರಣಗಳನ್ನು ಮುಸುಕಲಾರದೋ ಅದೇ ಪ್ರಕಾರ ತನ್ನ ಆತ್ಮತತ್ತ್ವದ ರಹಸ್ಯವನ್ನು ತಿಳಿದಂತಹ ಭವ್ಯನನ್ನು ಯಾವ ತರದ ಕರ್ಮಗಳೂ ಸೇರಲಾರವು.

ಕನ್ನಡಿಯೊಳಗುದ್ದುರುಳುವ ।
ದನ್ನೆವರಂ ನಿಜದ ನಿಶ್ಚಲತ್ವಂ ತನ್ನೊಳ್ ॥
ಚೆನ್ನಾಗಿ ನೆಲಸಿ ನಿಂದೊಡೆ ।
ಪನ್ನಗಪತಿವಂದ್ಯನಾಗಿ ಸುಖವಂ ಪಡೆವಂ ॥ ೧೦೦ ॥

ಎಲೈ ಭವ್ಯನೇ! ಕನ್ನಡಿಯ ಮೇಲೆ ಇರಿಸಿದ ಉದ್ದು ಎಷ್ಟು ಸಮಯದವರೆಗೆ ಸ್ಥಿರವಾಗಿರುವುದೋ ಅಷ್ಟು ಸಮಯದ ವರೆಗಾದರೂ ತನ್ನಾತ್ಮನಲ್ಲಿ ಲೀನನಾಗಿ, ಚಂಚಲ ರಹಿತನಾಗಿ, ಸ್ಥಿರವಾಗಿ ಆತ್ಮನನ್ನು ಧ್ಯಾನಿಸಿದರೆ ಧರಣೇಂದ್ರಾದಿಗಳಿಂದ ವಂದಿತನಾಗಿ ಅನಂತಸುಖವನ್ನು ಪಡೆಯುವನು.

ಭವಸುಖಕೆಳಸಿ ಕೆಲಂಬರು ॥
ಭುವನದೊಳುತ್ಕೃಷ್ಟ ಬಾಹ್ಯತಪದೊಳ್ ನೆಗಳ್ದಂ ॥
ಭವನಾದಿಗಳೊಳಗೊಂದೇ ।
ಭವದೊಳಗನುಭವಿಸಿ ಮತ್ತೆ ಭವದೊಳು ಬೀಳ್ವರ್ ॥ ೧೦೧ ॥

ಎಲೈ ಭವ್ಯನೇ! ಕೆಲವರು ಈ ಸಂಸಾರದ ಅನೇಕ ಸುಖವನ್ನಪೇಕ್ಷಿಸಿ ಲೋಕದಲ್ಲಿ ಉತ್ಕೃಷ್ಟವಾದ ಬಾಹ್ಯ (ಮಿಥ್ಯಾ) ತಪಸ್ಸನ್ನು ಮಾಡಿ, ಭವನವಾಸಿ, ವ್ಯಂತರ ಮೊದಲಾದ ದೇವತೆಗಳಾಗಿ ಜನಿಸಿ, ಒಂದೇ ಭವದಲ್ಲಿ ಸುಖವನ್ನು ಅನುಭವಿಸಿ ಪುನಃ ಸಂಸಾರದಲ್ಲಿಯೇ ಬೀಳುವರು.

ಹಿಂದಿಲ್ಲದೆ ಮುಂದಿಲ್ಲದೆ ।
ಯೊಂದೇ ಭವದಲ್ಲಿಯುದಯವಾಗುವ ಸುಖಮಂ ॥
ಮುಂದರಿಯದವನು ಬಯಸುವ ।
ಹಿಂದಂ ಮುಂದರಿದ ಜೀವನೊಂದಂ ಬಯಸಂ ॥ ೧೦೨ ॥

ಎಲೈ ಭವ್ಯನೇ! ಯಾವನು ಹಿಂದಿನ, ಮುಂದಿನ ಭವದ ಸುಖವನ್ನು ಯೋಚಿಸದೆ, ಈ ಭವದ ಸುಖದಲ್ಲಿ ಮಗ್ನನಾಗುತ್ತಾನೆಯೋ, ಅವನು ಅನೇಕ ಕಷ್ಟಗಳನ್ನು ಅನುಭವಿಸುತ್ತಾನೆ. ಆದರೆ ಹಿಂದಿನ ಮತ್ತು ಮುಂದಿನ ಭವದ ಕಷ್ಟಗಳನ್ನು ವಿಚಾರಿಸುವವನು ಯಾವ ಸಾಂಸಾರಿಕ ಸುಖವನ್ನೂ ಅಪೇಕ್ಷಿಸಲಾರನು.

ನಾನಾಪ್ರಕಾರದಿಂದಂ ।
ತಾನೇ ತನ್ನೊಳಗೆ ನಿಂದು ನಿಶ್ಚಿಂತತೆಯಿಂ ॥
ಜ್ಞಾನವನೆ ಪಿಡಿಯೆ ಸಾಧ್ಯಂ ।
ಜ್ಞಾನವೆ ತಾನಾಗಿ ಕೆಡದ ಸುಖದೊಳಗಿರ್ಪಂ ॥ ೧೦೩ ॥

ಎಲೈ ಭವ್ಯನೇ! ಯಾವ ಪ್ರಕಾರದಿಂದಲಾದರೂ ತಾನು ತನ್ನ ಆತ್ಮನಲ್ಲಿ ನಿಶ್ಚಿಂತತೆಯಿಂದ ಲೀನನಾಗಿ, ಆತ್ಮಜ್ಞಾನವನ್ನು ಮಾಡಬೇಕು, ಆ ಜ್ಞಾನವೇ ಶಾಶ್ವತವಾದ ಸುಖಕ್ಕೆ ಕಾರಣವಾದದ್ದು. ಆತ್ಮಜ್ಞಾನಿಯು ಶಾಶ್ವತವಾದ ಸುಖವನ್ನು ಪಡೆಯುವರೇ ಪ್ರಯತ್ನಿಸಬೇಕು.

ಜಯು ಪರಮ ನಿತ್ಯರೂಪನೆ ।
ಜಯು ಚಿನ್ಮಯು ಶಾಂತರೂಪ ಮಲನಿರ್ಲೇಪನೆ ॥
ಭಯುರಹಿತ ಪಾಪನಾಶನೆ ।
ಜಯು ಜಯು ಸುಪವಿತ್ರರೂಪ ಕೋಪವಿಲೋಪಾ ॥ ೧೦೪ ॥

ಎಲ್ಲೈ ಪರಮೋತ್ಕೃಷ್ಟನಾದ. ಶಾಶ್ವತವಾದ ಸ್ವರೂಪವುಳ್ಳ ಪರಮಾತ್ಮನೇ! ನಿನಗೆ ಜಯುವಾಗಲಿ. ಜ್ಞಾನಮಯುನಾದ, ಶಾಂತಸ್ವರೂಪನಾದ ಮತ್ತು ನಿರ್ಮಲನಾದ ಪರಮಾತ್ಮನೇ ನಿನಗೆ ಜಯುವಾಗಲಿ ಹಾಗೂ ಭಯುರಹಿತನಾದ. ಪಾಪರಹಿತನಾದ. ಕೋಪರಹಿತನಾದ ಮತ್ತು ಪರಮ ಪವಿತ್ರನಾದ ಪರಮಾತ್ಮನೇ ನಿನಗೆ ಜಯು ವಾಗಲಿ.

ಜಯು ಜಯು ಪರಮಾನಂದಾ ।
ಜಯು ಜಯು ಚಿದ್ರೂಪ ಸಕಲ ಗುಣಗಣ ಮಹಿಮಾ ॥
ಜಯು ಜಯು ನಿತ್ಯಾನಂದಾ ।
ಜಯು ಜಯು ಚೈತನ್ಯ ಸಹಜ ಸುಗುಣಾಭರಣಾ ॥ ೧೦೫ ॥

ಓ ಪರಮಾನಂದಮಯುನಾದ ಪರಮಾತ್ಮನೇ! ನಿನಗೆ ಜಯುವಾಗಲಿ. ಜಯುವಾಗಲಿ. ಓ ಜ್ಞಾನಸ್ವರೂಪನಾದ ಮತ್ತು ಸಮಸ್ತ ಗುಣಗಳ ಸಮೂಹದಿಂದ ಶೋಭಿಸು ತ್ತಿರುವ ಪರಮಾತ್ಮನೇ ಜಯುಶಾಲಿಯಾಗು, ಜಯುಶಾಲಿಯಾಗು. ಓ! ನಿತ್ಯಾನಂದ ಮಯುನಾದ ಪರಮಾತ್ಮನೆ! ಜಯು! ಜಯು! ಓ! ಸ್ವಾಭಾವಿಕವಾದ ಚೈತನ್ಯಗುಣ ವೆಂಬ ಆಭರಣದಿಂದ ಭೂಷಿತನಾದ ಪರಮಾತ್ಮನೇ! ಜಯುಶಾಲಿಯಾಗು. ಜಯು ಶಾಲಿಯಾಗು.

ಜಯು ಮಂಗಲ ಅಘಹರಣಾ ।
ಜಯು ಮಂಗಲ ನಿರುಪಮಾಷ್ಟ ಗುಣಗಣಧರಣಾ ॥
ಜಯು ಮಂಗಲ ಸುಖಕರಣಾ ।
ಜಯು ಮಂಗಲ ಸರ್ವಲೋಕವಂದಿತಚರಣಾ ॥ ೧೦೬ ॥

ಓ! ಮಂಗಲಕರನಾದ ಪಾಪರಹಿತ ಪರಮಾತ್ಮನೇ! ನಿನಗೆ ಜಯುವಾಗಲಿ. ಓ! ಮಂಗಲಮಯುವಾದ ಮತ್ತು ಉಪಮಾರಹಿತವಾದ ಸಮ್ಯಕ್ತ್ವಾದ್ಯಷ್ಟ ಗುಣಗಳನ್ನು ಧರಿಸಿದ ಪರಮಾತ್ಮನೇ! ಜಯುಶಾಲಿಯಾಗು. ಓ! ಮಂಗಲ ಸ್ವರೂಪನಾದ ಮತ್ತು ಸುಖಕಾರಕನಾದ ಪರಮಾತ್ಮನೇ! ಜಯಿಸು. ಓ! ಮಂಗಲದಾಯುಕವಾದ ಹಾಗೂ ಸರ್ವಲೋಕವಂದಿತವಾದ ಪಾದಕಮಲವುಳ್ಳ ಪರಮಾತ್ಮನೇ! ನಿನಗೆ ಜಯುವಾಗಲಿ.

ಉರು ಗೋಮಟಸಾರಮಿಸಂ ।
ಪರಮಾರ್ಥದ ತಂದೆ-ತಾಯಿ ಪ್ರಾಭೃತಮೆಂದುಂ ॥
ಪಿರಿದಾಗಿ ನಂಬಿ ನೇಮಿೂ-।
ಶ್ವರಪಾದಾಂಬುಜಮ ನೆನೆಸು ವಿನಮಿಸಿ ಪೇಳ್ದೆಂ ॥ ೧೦೭ ॥

ಓ! ಭವ್ಯರೇ! ಗೋಮಟಸಾರ, ಷಟ್‌ಪ್ರಾಭೃತ, ಅಧ್ಯಾತ್ಮತರಂಗಿಣಿ ಮೊದಲಾದ ಗ್ರಂಥಗಳಲ್ಲಿ ಆತ್ಮತತ್ತ್ವದ ವಿಷಯುವನ್ನು ವಿಸ್ತಾರವಾಗಿ ಹೇಳಿರುತ್ತಾರೆ. ಆದರೆ

ಈ ಭವ್ಯಾಮೃತವು ಅವುಗಳ ಸಾರವೆಂಬುದಾಗಿ ಬಹುವಿಶ್ವಾಸದಿಂದ ನಂಬಿ ನೇಮೀಶ್ವರ ಸ್ವಾಮಿಯ ಪಾದಪದ್ಮಗಳಿಗೆ ಭಕ್ತಿಯಿಂದ ವಂದಿಸಿ ಈ ಗ್ರಂಥವನ್ನು ಹೇಳಿರುವೆನು.

ಶ್ರಾವ್ಯವಚೋ ಭಾವ್ಯಮನ- ।
ರ್ಗವ್ಯಯ ಸುಖದಲ್ಲಿ ಲಿಪ್ಸೆಯುಳ್ಳೊಡೆ ಸತತಂ ॥
ಭವ್ಯಾಮೃತಮಿಾ ಸ್ತೋತ್ರಮಂ ।
ಭವ್ಯರು ನಿತ್ಯದಲು ಪಠಿಸಿ ಭಾವಿಸುತ್ತಿರ್ಕೆಂ ॥ ೧೦೮ ॥

ಓ ಭವ್ಯರೇ! ಕೇಳುವುದಕ್ಕೆ ಅತ್ಯಂತ ಮಧುರವಾದ, ಭಾವಿಸುವುದಕ್ಕೆ ತಕ್ಕುದಾದ ಈ ಸ್ತುತಿಯನ್ನು ಭಾವಿಸಿ, ಮುಕ್ತಿಸುಖವನ್ನು ಹೊಂದಬೇಕೆಂದು ಇಚ್ಛೆ ಇರುವುದಾದರೆ ಈ "ಭವ್ಯಾಮೃತವೆಂಬ" ಸ್ತೋತ್ರವನ್ನು ನಿತ್ಯದಲ್ಲೂ ಪಠನೆ ಮಾಡಿ ಚಿಂತಿಸಬೇಕು.

ನೂರೆಂಟು ಪದನುಮಿದರೊಳು ।
ಸಾರತರಾತ್ಮಸ್ವರೂಪಮೊಂದೇ ಮುಖ್ಯಂ ॥
ಆರೊಬ್ಬರೋದಲವರಿಗೆ ।
ಮೂರೇ ಭವ ತಡೆದರೆಂಟು ಭವದೊಳು ಮೋಕ್ಷಂ ॥ ೧೦೯ ॥

ಇದರಲ್ಲಿ ಮುಖ್ಯವಾಗಿ ಪರಮಾತ್ಮ ತತ್ತ್ವದ ಸ್ವರೂಪ ಒಂದನ್ನೇ ನಿರೂಪಿಸಲಾಗಿದೆ. ಮತ್ತು ಇದರಲ್ಲಿ ಒಟ್ಟು ನೂರೆಂಟು ಪದ್ಯಗಳು ಇರುವುವು. ಈ ಗ್ರಂಥವನ್ನು ಪ್ರತಿನಿತ್ಯದಲ್ಲಿಯೂ ಭಕ್ತಿಯಿಂದ ಯಾರುಪಠಿಸುತ್ತಾರೆಯೋ ಅವರಿಗೆ ಮೂರು ಅಥವಾ ಹೆಚ್ಚೆಂದರೆ ಎಂಟು ಭವದೊಳಗೆ ನಿಃಸಂದೇಹವಾಗಿ ಮೋಕ್ಷವು ಪ್ರಾಪ್ತಿಯಾಗುವುದು.

ಭವ್ಯಾಮೃತಮಿದು ಸೇವ್ಯಂ ।
ಭವ್ಯಂಗಮೃತೋಪಮಂ ದುರಂತಾಸಾತಾ- ॥
ಭವ್ಯಂಗೆ ಕಾಲಕೂಟಂ ।
ದಿವ್ಯಜಿನೇಶ್ವರನ ವಚನ ನಂಬಿರೆ ಮೋಕ್ಷಂ ॥ ೧೧೦ ॥

ಈ ಭವ್ಯಾಮೃತವು ಎಲ್ಲರೂ ಓದಬೇಕಾದ ಪುಸ್ತಕವು. ಇದು ಭವ್ಯನಿಗೆ ಅಮೃತಕ್ಕೆ ಸಮಾನವಾದದ್ದು. ಪಾಪಿಯಾದ ಅಭವ್ಯನಿಗೆ ಇದಂ ವಿಷದಂತೆ ರುಚಿಸಲಾರದು. ಆದುದರಿಂದ ಈ ಮಾತನ್ನು ಸಾಕ್ಷಾತ್ ಜಿನೇಶ್ವರನೇ ಹೇಳಿದುದು ಎಂದು ನಂಬಿದರೆ ಮೋಕ್ಷ ಪ್ರಾಪ್ತಿಯಾಗುವುದು.

ಇತಿ ಭವ್ಯಾಮೃತಂ ಸಂಪೂರ್ಣಂ

# ಪಂಚಪರಮೇಷ್ಠಿಗಳ ಸ್ವರೂಪ

ಣಮೋ ಅರಹಂತಾಣಂ । ಣಮೋ ಸಿದ್ಧಾಣಂ । ಣಮೋ ಆಇರಿಯಾಣಂ । ಣಮೋ ಉವಜ್ಝಾಯಾಣಂ । ಣಮೋ ಲೋಏ ಸವ್ವಸಾಹೂಣಂ । ಇವು ಪಂಚನಮಸ್ಕಾರ ಮಂತ್ರಗಳು. ಈ ಪಂಚಪರಮೇಷ್ಠಿಗಳ ಸ್ವರೂಪವು ಕೆಳಗಿನಂತಿದೆ:-

## ಅರಹಂತರ ಸ್ವರೂಪ

ಆತ್ಮನಲ್ಲಿರುವ ಅನಂತಜ್ಞಾನ ಮೊದಲಾದ ಗುಣಗಳನ್ನು ಕೆಡಿಸುವ ಜ್ಞಾನಾವರಣೀಯು, ದರ್ಶನಾವರಣೀಯು, ಮೋಹನೀಯು ಮತ್ತು ಅಂತರಾಯುಗಳೆಂಬ ನಾಲ್ಕು ಘಾತಿಕರ್ಮಗಳ ನಾಶದಿಂದ ಉಂಟಾದ ಕೇವಲಜ್ಞಾನ, ಕೇವಲದರ್ಶನ, ಕ್ಷಾಯಿಕಸಮ್ಯಕ್ತ್ವ, ಕ್ಷಾಯಿಕಚಾರಿತ್ರ, ಕ್ಷಾಯಿಕದಾನ, ಕ್ಷಾಯಿಕಲಾಭ, ಕ್ಷಾಯಿಕಭೋಗ, ಕ್ಷಾಯಿಕೋಪಭೋಗ ಮತ್ತು ಕ್ಷಾಯಿಕವೀರ್ಯಗಳೆಂಬ ಈ ನವಕೇವಲಲಬ್ಧಿಗಳ ಪ್ರಭಾವದಿಂದ ಪರಮಾತ್ಮನೆಂಬ ಹೆಸರನ್ನು ಹೊಂದಿದವರೇ, ಅರಹಂತರು. ಇವರು ಮೂರು ಲೋಕದ ಜನರ ನೇತ್ರಗಳಿಗೆ ಆನಂದವನ್ನುಂಟು ಮಾಡುವ, ಕೋಟಿಸೂರ್ಯಪ್ರಕಾಶದಂತೆ ಹೊಳೆಯುವ ಪರಮೌದಾರಿಕ ದಿವ್ಯ ಶರೀರವನ್ನು ಧರಿಸಿರುವರು. ಈ ಭೂಮಿಯಿಂದ ಐದು ಸಾವಿರ ಬಿಲ್ಲಿನಷ್ಟೆತ್ತರದ ಆಕಾಶದಲ್ಲಿ ದೇವೇಂದ್ರನ ಆಜ್ಞಾನುಸಾರವಾಗಿ ಜಿನಭಕ್ತಿಯುಕ್ತನಾದ ಕುಬೇರನು ರಚಿಸಿದ ಸಮವಸರಣದ ಮಧ್ಯದಲ್ಲಿರುವ ಲಕ್ಷ್ಮೀಮಂಟಪದ ತೃತೀಯ ಪೀಠದ ಮೇಲಿರುವ ಗಂಧಕುಟಿಯ ಮಧ್ಯದಲ್ಲಿ ಅನೇಕ ಪ್ರಕಾರವಾದ ರತ್ನಗಳಿಂದ ನಿರ್ಮಿತವಾದ ಮತ್ತು ಅನೇಕ ವಿಧವಾದ ವರ್ಣಗಳಿಂದ ಶೋಭಿಸುತ್ತಿರುವ ಸಿಂಹ ಪೀಠವಿದೆ. ಅದರ ಮೇಲಿರುವ ಸಹಸ್ರ ದಲ ಕಮಲವನ್ನು ಮುಟ್ಟದೆ ನಾಲ್ಕಂಗುಲ ಮೇಲೆ ವಿರಾಜಮಾನರಾಗಿರುವರು. ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಸಿಂಹಾಸನ, ಭಾಮಂಡಲ, ದುಂದುಭಿ ಮತ್ತು ಆತಪತ್ರ ( ಧವಲಛತ್ರ )ಗಳೆಂಬ ಅಷ್ಟಮಹಾಪ್ರಾತಿಹಾರ್ಯಗಳಿಂದ ಇವರು ಶೋಭಿಸುತ್ತಿದ್ದಾರೆ. ಇವರು ಕ್ಷುಧೆ, ತೃಷೆ, ಭಯ, ದ್ವೇಷ, ಪ್ರೀತಿ, ಮೋಹ, ಚಿಂತೆ, ಮುಪ್ಪು, ರೋಗ, ಮರಣ. ಖೇದ, ಮದ, ರತಿ ( ಕ್ರೀಡೆ ), ಆಶ್ಚರ್ಯ, ಜನನ, ನಿದ್ರೆ ಮತ್ತು ವಿಷಾದಗಳೆಂಬ ಹದಿನೆಂಟು ದೋಷಗಳಿಂದ ರಹಿತರು. ಆಪ್ತರಲ್ಲಿ ಶ್ರೇಷ್ಠರು. ನಿಸ್ವೇದತ್ವ ( ಬೆವರಿಲ್ಲದಿರುವುದು ). ನಿರ್ಮಲತ್ವ ( ಮಲರಹಿತ ), ಕ್ಷೀರಗೌರರುಧಿರತ್ವ ( ರಕ್ತವು ಹಾಲಿನಂತೆ ), ಸಮಚತುರಸ್ರಾಕಾರ, ವಜ್ರವೃಷಭನಾರಾಚ ಸಂಹನನ. ಸುರೂಪತ್ವ, ಸೌರಭತ್ವ ( ಪರಿಮಳ ), ಸೌಲಕ್ಷಣ್ಯ, ಅನಂತಶಕ್ತಿ, ಪ್ರಿಯಹಿತವಾದಿತ್ವ ಎಂಬ ಈ ಹತ್ತು ಗುಣಗಳು ಇವರ ಜನನ ಕಾಲದಲ್ಲಿ ಉಂಟಾದ ಸಹಜವಾದ ಅತಿಶಯಗಳಾಗಿವೆ. ೧. ನೂರು ಯೋಜನ ವರೆಗೆ ಸುಭಿಕ್ಷೆ, ೨. ಆಕಾಶಗಮನ, ೩. ಅಹಿಂಸಾ,

೪. ಆಹಾರರಹಿತ, ೫. ಉಪಸರ್ಗಾಭಾವ, ೬. ಚತುರ್ಮುಖ, ೭. ಸಮಸ್ತ ವಿದ್ಯೆಗಳಿಗೆ ಒಡೆಯ, ೮. ಛಾಯಾ ರಹಿತ, ೯. ಪಕ್ಷ್ಮಸ್ಪಂದರಹಿತ. ೧೦. ನಖಕೇಶಗಳು ಬೆಳೆಯದಿರುವುದು ಈ ಹತ್ತು ಅತಿಶಯಗಳು ಘಾತಿಕರ್ಮದ ನಾಶದಿಂದಾಗುತ್ತವೆ. ೧. ಸರ್ವಾರ್ಧ ಮಾಗಧೀ ಭಾಷೆ, ೨. ಸರ್ವಜೀವಮೈತ್ರಿ, ೩. ಸರ್ವಋತುಗಳಲ್ಲಿ ಫಲಯುಕ್ತವಾದ ವೃಕ್ಷಗಳು, ೪. ಆದರ್ಶಸಮಭೂಮಿ, ೫. ಪರಿಮಳದ ಗಾಳಿ, ೬. ಸರ್ವಜನಾನಂದ, ೭. ತೃಣಧೂಳಿಕಂಟಕರಹಿತವಾಗಿ ಒಂದು ಯೋಜನದ ವರೆಗೆ ವಾತಕುಮಾರರು ಮಾಡುವ ಸಂಸ್ಕರಣ, ೮. ಮೇಘ ಕುಮಾರರು ಮಾಡುವ ಪರಿಮಳವಾದ ಗಂಧೋದಕ ಸೇಚನ, ೯ ಪಾದನ್ಯಾಸಪದ್ಮ ೧೦. ಧಾನ್ಯಸಂಪನ್ನ ಭೂಮಿ, ೧೧. ಆಕಾಶವು ನಿರ್ಮಲವಾಗಿರುವುದು, ೧೨. ದೇವಾಗಮನ, ೧೩. ಧರ್ಮಚಕ್ರ, ೧೪. ಅಷ್ಟಮಂಗಲದ್ರವ್ಯಗಳು ಎಂಬ ದೇವತೆಗಳು ಮಾಡುವ ಹದಿನಾಲ್ಕು ಅತಿಶಯಗಳು ಉಂಟಾಗುವುವು. ಇವರಿಗೆ ಗರ್ಭಾವತರಣಾದಿ ಪಂಚ ಮಹಾಕಲ್ಯಾಣಗಳು ಜರಗುವುವು. ನೂರು ಮಂದಿ ದೇವೇಂದ್ರರೂ ಮುನೀಂದ್ರರೂ ನಮಿಸುತ್ತಿರುವರು ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ ಮತ್ತು ಅನಂತಸುಖಗಳೆಂಬ ನಾಲ್ಕು ಅನಂತವಸ್ತುಗಳು ಪ್ರಾಪ್ತವಾಗುವುವು ಮತ್ತು ಇವರನ್ನು ವೀತರಾಗ, ಸರ್ವಜ್ಞ ಮೊದಲಾದ ಸಹಸ್ರನಾಮಗಳಿಂದ ದೇವೇಂದ್ರನು ಸ್ತುತಿಸುತ್ತಾನೆ. ಈ ಪ್ರಕಾರವಾಗಿ ೪೬ ಗುಣಗಳಿಂದ ಕೂಡಿದ ಅರ್ಹತ್ಪರಮೇಷ್ಠಿಗಳಿಗೆ ಅವರ ಈ ಗುಣಗಳು ನನಗೂ ಪ್ರಾಪ್ತವಾಗಲೆಂದು 'ಣಮೋ ಅರಹಂತಾಣಂ' ಎಂಬ ಪದದಿಂದ ನಮಸ್ಕಾರವನ್ನು ಮಾಡುವೆನು.

## ಸಿದ್ಧಪರಮೇಷ್ಠಿಗಳ ಸ್ವರೂಪ

ಮೊದಲು ಅರ್ಹತ್ಪದವಿಯಲ್ಲಿ ಪ್ರಾಪ್ತವಾದ ಅನಂತಚತುಷ್ಟಯಗಳಿಂದ ಕೂಡಿದವರಾಗಿ, ಬಾಕಿ ಉಳಿದ ವೇದನೀಯ. ಆಯುಷ್ಯ, ನಾಮ ಮತ್ತು ಗೋತ್ರಗಳೆಂಬ ಅಘಾತಿಕರ್ಮಗಳನ್ನು ಅಯೋಗಿಕೇವಲಿ ಗುಣಸ್ಥಾನದ ಕಡೆಯ ಸಮಯದಲ್ಲಿ ಕೆಡಿಸಿದವರೇ ಸಿದ್ಧಪರಮೇಷ್ಠಿಗಳು. ಇವರು ಅಷ್ಟವಿಧಕರ್ಮನಿರ್ಮುಕ್ತರು ಅನಂತಸುಖಸ್ವರೂಪರು. ಪುನರ್ಬಂಧರಹಿತರು ಮತ್ತು ನಿತ್ಯರು. ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ, ಸೂಕ್ಷ್ಮತ್ವ, ಅವಗಾಹನತ್ವ ( ವ್ಯಾಪಿಸುವಿಕೆ ), ಅಗುರುಲಘುತ್ವ (ಭಾರ–ಹಗುರ ಇಲ್ಲದಿರುವಿಕೆ ), ಅವ್ಯಾಬಾಧತ್ವ (ಯಾವ ತರದ ಬಾಧೆ ಇಲ್ಲದಿರುವಿಕೆ) ಎಂಬ ಈ ಎಂಟು ಪ್ರಕಾರದ ಗುಣಗಳಿಂದ ಇವರು ಶೋಭಿತರಾಗಿರುವರು. ಕೃತಕೃತರಾದ ಇವರು ಈಷತ್ಪ್ರಾಗ್ಭಾರವೆಂಬ ಎಂಟನೇ ಭೂಮಿಯ ಮಧ್ಯದಲ್ಲಿ ಎಂಟು ಯೋಜನ ಎತ್ತರವುಳ್ಳ, ಮನುಷ್ಯಕ್ಷೇತ್ರದಷ್ಟಿರುವ ನಾಲ್ವತ್ತೈದು ಲಕ್ಷ ಯೋಜನ ಅಗಲವಾದ ಮತ್ತು ಬಿಳಿ ಕೊಡೆಯಾಕಾರವಾಗಿ ಶೋಭಿಸುತ್ತಿರುವ ಸಿದ್ಧಶಿಲೆಯ ಮೇಲೆ, ಲೋಕದ ಮೇಲ್ಭಾಗವಾದ ತನುವಾತ

ವಲಯದಲ್ಲಿ ಒಂದೇ ಸಮಯದಲ್ಲಿ ಅಲ್ಲಿಗೆ ಹೋಗಿ ನೆಲಸುವರು. ಕೊನೆಯ ಶರೀರ ಕ್ಕಿಂತ ಸ್ವಲ್ಪ ಕಮ್ಮಿಯಾದ ಪ್ರಮಾಣವುಳ್ಳವರಾಗಿ, ಅಶರೀರ ಮೇಘಾಕೃತಿವುಳ್ಳವ ರಾಗಿ, ಛಾಯಾ (ನೆರಳು) ಪ್ರತಿಮೆಯಂತೆ ಸಾಕಾರ ನಿರಾಕಾರ ಸ್ವರೂಪರಾಗಿ ಮತ್ತು ಅತೀಂದ್ರಿಯ ಗೋಚರರಾಗಿ ಶ್ರೀ ಸಿದ್ಧ ಪರಮೇಷ್ಠಿಗಳು ವಿರಾಜಿಸುವರು. ಮೇಲೆ ಹೇಳಿದ ಅನಂತಜ್ಞಾನ ಮೊದಲಾದ ಎಂಟು ಗುಣಗಳ ಪ್ರಾಪ್ತಿಗೋಸ್ಕರ "ಣಮೋ ಸಿದ್ಧಾಣಂ" ಎಂಬ ಪದದಿಂದ ಸಿದ್ಧಪರಮೇಷ್ಠಿಗಳಿಗೆ ನಮಸ್ಕಾರವನ್ನು ಮಾಡು ವೆನು.

## ಆಚಾರ್ಯ ಪರಮೇಷ್ಠಿಗಳ ಸ್ವರೂಪ.

ಪರಮಾಗಮ ಶಾಸ್ತ್ರಜ್ಞಾನದಿಂದ ಕೂಡಿದವರಾಗಿ ಪೂರ್ವಾಹ್ನ, ಮಧ್ಯಾಹ್ನ ಮತ್ತು ಸಂಜೆ ಸಾಮಾಯಿಕವನ್ನು ಪ್ರತಿದಿನ ಮಾಡುವ ಮುನಿಗಳು ಆಚಾರ್ಯ ಪರಮೇಷ್ಠಿಗಳು. ಇವರು ನಿಃಶಂಕೆ, ನಿಃಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ. ಉಪಗೂಹನತ್ವ, ಸ್ಥಿತೀಕರಣ, ವಾತ್ಸಲ್ಯ ಮತ್ತು ಧರ್ಮ ಪ್ರಭಾವನೆಯೆಂಬ ಎಂಟು ವಿಧವಾದ ಅಂಗದಿಂದ ಕೂಡಿದ ಸಮ್ಯಗ್ದರ್ಶನ ಯುಕ್ತರಾಗಿರುವರು. ಅನಶನ (ಉಪವಾಸ). ಅವಮೋದರ್ಯ (ಸ್ವಲ್ಪಾಹಾರ), ವೃತ್ತಿಪರಿಸಂಖ್ಯಾನ (ಆಹಾರಾದಿ ಗಮನವಿಧಿ), ರಸಪರಿತ್ಯಾಗ (ಹಾಲು, ತುಪ್ಪ ಗಳ ತ್ಯಾಗ), ವಿವಿಕ್ತಶಯ್ಯಾಸನ (ಏಕಾಂತವಾಸ) ಮತ್ತು ಕಾಯಕ್ಲೇಶವೆಂಬ ಆರು ತರದ ಬಾಹ್ಯತಪಸ್ಸನ್ನು ಆಚರಿಸುವರು. ಪ್ರಾಯಶ್ಚಿತ್ತ, ವಿನಯ, ವೈಯ್ಯಾ- ವೃತ್ಯ, ಸ್ವಾಧ್ಯಾಯ. ಉತ್ಸರ್ಗ ಮತ್ತು ಧ್ಯಾನಗಳೆಂಬ ಅಭ್ಯಂತರ ತಪಸ್ಸುಗಳನ್ನು ಮಾಡುವರು. ಆರ್ತಧ್ಯಾನ ಮೊದಲಾದವುಗಳಿಲ್ಲದಿರುವ ಮನೋಗುಪ್ತಿಯಿಂದಲೂ ಸ್ತ್ರೀಕಥಾದಿಗಳಿಲ್ಲದಿರುವ ವಚನಗುಪ್ತಿಯಿಂದಲೂ ಶರೀರದಿಂದ ದುಶ್ಚೇಷ್ಟೆಗಳಿಲ್ಲ ದಿರುವ ಕಾಯಗುಪ್ತಿಯಿಂದಲೂ ಕೂಡಿರುವರು. ಪ್ರಾಣಿಗಳಿಲ್ಲದಿರುವ ಮಾರ್ಗ ದಲ್ಲಿ ನಾಲ್ಕು ಮೊಳದ ಪ್ರಮಾಣ ಮುಂದೆ ನೋಡಿಕೊಂಡು ನಡೆಯುವ 'ಈರ್ಯಾಸಮಿತಿ" ಕಠೋರವಾದ ಮಾತುಗಳಿಲ್ಲದೆ ಶಾಸ್ತ್ರಾನುಸಾರವಾಗಿ ಮಾತ ನಾಡುವ 'ಭಾಷಾಸಮಿತಿ', ಶಾಸ್ತ್ರೋಕ್ತವಾದ ವಿಧಿಯಿಂದ ನಿರ್ದೋಷವಾದ ಆಹಾರವನ್ನು ನೋಡಿ ರಾಗದ್ವೇಷವಿಲ್ಲದೆ ಸಮಚಿತ್ತದಿಂದ ಸ್ವೀಕರಿಸುವ "ಏಷಣಾ ಸಮಿತಿ", ಜ್ಞಾನೋಪಕರಣ (ಪುಸ್ತಕ), ಸಂಯಮೋಪಕರಣ (ಪಿಂಛಿ), ಶೌಚೋಪ ಕರಣ (ಕಮಂಡಲು) ಇವು ಮೊದಲಾದ ಉಪಕರಣಗಳನ್ನು ತೆಗೆದುಕೊಳ್ಳುವಾಗ ಇಡುವಾಗ, ಪ್ರಾಣಿಬಾಧೆ ಬರದ ಹಾಗೆ ಪ್ರಯತ್ನಿಸುವ "ಆದಾನ-ನಿಕ್ಷೇಪಣಾ ಸಮಿತಿ",ಜಂತುರಹಿತವಾದ ಪ್ರದೇಶದಲ್ಲಿ ಮಲಮೂತ್ರಾದಿಗಳನ್ನು ಬಿಡುವ "ಉತ್ಸರ್ಗಸಮಿತಿ" ಎಂಬ ಪಂಚ ಸಮಿತಿಗಳನ್ನು ಇವರು ಪಾಲಿಸುವರು. ಕೊಲೆ, ಹುಸಿ, ಕಳವು, ಕಾಮಸೇವನೆ ಮತ್ತು ಪರಿಗ್ರಹಗಳ ತ್ಯಾಗದಿಂದುಟಾದ ಅಹಿಂಸಾ

ಮಹಾವ್ರತ, ಸತ್ಯಮಹಾವ್ರತ, ಅಚೌರ್ಯಮಹಾವ್ರತ, ಬ್ರಹ್ಮಚರ್ಯಮಹಾವ್ರತ ಮತ್ತು ಪರಿಗ್ರಹತ್ಯಾಗಮಹಾವ್ರತಗಳೆಂಬ ಪಂಚಮಹಾವ್ರತಗಳನ್ನು ಪಾಲಿಸುವರು, ಈ ಪ್ರಕಾರವಾದ ತ್ರಿಗುಪ್ತಿ, ಪಂಚಸಮಿತಿ ಮತ್ತು ಪಂಚವ್ರತಗಳೆಂಬ ಹದಿಮೂರು ವಿಧದ ಚಾರಿತ್ರ್ಯಾಚಾರದಿಂದ ಕೂಡಿರುವರು. ಆಹಾರದಿಂದುಂಟಾದ ಬಲವೀರ್ಯ, ಕರ್ಮೋಪಶಮದಿಂದಾದ ಸಾಮರ್ಥ್ಯವೀರ್ಯ, ಶರೀರದಲ್ಲುಂಟಾದ ನಿಜವೀರ್ಯ, ಆರ್ಷದಿಂದುಂಟಾದ ಪುರುಷಾಕಾರವಾದ ಪರಾಕ್ರಮವೀರ್ಯ, ಮನೋಬಲವೆಂಬ ಧೃತಿವೀರ್ಯ ಎಂಬ ಪಂಚವೀರ್ಯಾಚಾರಗಳಿಂದ ಶೋಭಿಸುವರು. ಈ ಪ್ರಕಾರವಾಗಿ ಮೋಕ್ಷಕ್ಕೆ ಕಾರಣವಾದ ಜ್ಞಾನಾಚಾರ, ದರ್ಶನಾಚಾರ, ತಪಾಚಾರ, ಚಾರಿತ್ರ್ಯಾಚಾರ, ವೀರ್ಯಾಚಾರಗಳೆಂಬ ಪಂಚಾಚಾರಗಳನ್ನು ಪಾಲಿಸುತ್ತಾ ಮತ್ತೊಬ್ಬರಿಗೆ ಉಪದೇಶಿಸಿ, ಅವರನ್ನೂ ನಡೆಸುತ್ತಾ ಬರುವಂತಹ ಆಚಾರ್ಯಪರಮೇಷ್ಠಿಗಳಿಗೆ ಅವರ ಗುಣಗಳು ತನಗೂ ಲಭಿಸಲೆಂದು ' ಣಮೋ ಆಇರಿಯಾಣಂ ' ಎಂಬುದಾಗಿ ನಮಸ್ಕರಿಸುವೆನು.

## ಉಪಾಧ್ಯಾಯ ಪರಮೇಷ್ಠಿಗಳ ಸ್ವರೂಪ

ಮೊದಲು ಹೇಳಿದ ಪಂಚಾಚಾರಗಳನ್ನು ತಾನು ಆಚರಿಸುವವರಾಗಿ, ಶಿಕ್ಷೆ-ರಕ್ಷೆ ಮೊದಲಾದ ವಿಷಯಗಳಲ್ಲಿ ಪ್ರೀತಿ ಇಲ್ಲದವರಾಗಿ, ರತ್ನತ್ರಯಗಳನ್ನು ಪರಿಪಾಲಿಸುತ್ತಾ ಬರುವವರು ಉಪಾಧ್ಯಾಯ ಪರಮೇಷ್ಠಿಗಳು. ಇವರು ಮೋಕ್ಷಾಭಿಲಾಷಿಗಳಾದ ಭವ್ಯರಿಗೆ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲಗಳೆಂಬ ಷಡ್ದ್ರವ್ಯಗಳ ವಿಷಯಗಳನ್ನೂ ಜೀವಾಸ್ತಿಕಾಯ, ಪುದ್ಗಲಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ ಮತ್ತು ಆಕಾಶಾಸ್ತಿಕಾಯಗಳೆಂಬ ಪಂಚಾಸ್ತಿಕಾಯ ಸ್ವರೂಪವನ್ನೂ, ಜೀವತತ್ತ್ವ, ಅಜೀವತತ್ತ್ವ, ಆಸ್ರವತತ್ತ್ವ, ಬಂಧತತ್ತ್ವ, ಸಂವರ ತತ್ತ್ವ, ನಿರ್ಜರಾತತ್ತ್ವ ಮತ್ತು ಮೋಕ್ಷತತ್ತ್ವಗಳೆಂಬ ಸಪ್ತತತ್ತ್ವಗಳ ಸ್ವರೂಪವನ್ನೂ ತತ್ತ್ವಗಳಿಗೆ ಪುಣ್ಯಪದಾರ್ಥ ಮತ್ತು ಪಾಪಪದಾರ್ಥ ಇವುಗಳನ್ನು ಸೇರಿಸುವುದರಿಂದ ಇದೇ ಸಪ್ತ ಆಗುವ ನವಪದಾರ್ಥಗಳ ಸ್ವರೂಪವನ್ನೂ ಉಪದೇಶಿಸುವರು. ' ಸವ್ವೇ ಸುದ್ಧಾ ಹು ಸುದ್ಧಣಯಾ 'ಎಂಬ ಶುದ್ಧ ನಿಶ್ಚಯನಯದಿಂದ ಸಮಸ್ತವಾದ ಜೀವದ್ರವ್ಯ, ಜೀವಾಸ್ತಿಕಾಯ, ಜೀವತತ್ತ್ವ ಮತ್ತು ಜೀವಪದಾರ್ಥ ಇವುಗಳನ್ನು ಸೇವಿಸುವರು. ಪರಮ ಪೂಜ್ಯರಾದ ಅರಹಂತರು, ಸಿದ್ಧರನ್ನು ಇವರು ವಂದಿಸುವರು. ಅವರಲ್ಲಿಯೂ ಸಿದ್ಧರು ಸಂಸಾರದಿಂದ ಮುಕ್ತರಾದುದರಿಂದ ಪೂಜಾರ್ಹರು. ಲೋಕ ವ್ಯವಹಾರ ದಿಂದ ಪಂಚಮಹಾವ್ರತ, ಪಂಚಸಮಿತಿ, ತ್ರಿಗುಪ್ತಿ, ದಶಧರ್ಮ, ದ್ವಾದಶಾನುಪ್ರೇಕ್ಷೆ ಮತ್ತು ಇಪ್ಪತ್ತೆರಡು ಪರೀಷಹಜಯಗಳೆಂಬ ಚಾರಿತ್ರಗಳಿಂದುಂಟಾದ ಕರ್ಮಗಳ ಸಂವರೆಯನ್ನೂ, ತಪಸ್ಸಿನಿಂದುಂಟಾದ ನಿರ್ಜರೆಯನ್ನೂ ಮತ್ತು ಸಕಲ ಕರ್ಮಗಳ ಕ್ಷಯದಿಂದುಂಟಾದ ಮೋಕ್ಷಪದವಿಯನ್ನೂ ನಿತ್ಯ ಸೇವಿಸುವರು. ಆತ್ಮನು ಸಿದ್ಧರಿಗೆ ಸಮಾನನಾಗಿ ಇರುವುದರಿಂದ ಅವರನ್ನೇ ಧ್ಯಾನಿಸುವರು. ಉಳಿದ ದ್ರವ್ಯಗಳು, ಅಸ್ತಿ

ಕಾರ್ಯಗಳು, ತತ್ತ್ವ ಮತ್ತು ಪದಾರ್ಥಗಳು ಹೇಯಮಾದವುಗಳೆಂದು ಪರಮಕಾರು ಣ್ಯದಿಂದ ಉಪದೇಶಿಸುತ್ತಿರುವ ಹಾಗೂ ಏಕಾದಶಾಂಗ ಮತ್ತು ಚತುರ್ದಶ ಪೂರ್ವ ಧಾರಿಗಳಾದ ಉಪಾಧ್ಯಾಯ ಪರಮೇಷ್ಠಿಗಳಿಗೆ ರತ್ನತ್ರಯಸ್ವರೂಪವಾದ ಮೋಕ್ಷ ಮಾರ್ಗದ ಪ್ರಾಪ್ತಿಗೋಸ್ಕರ 'ಣಮೋ ಉವಜ್ಝಾಯಾಣಂ' ಎಂಬ ಪದದಿಂದ ನಮಸ್ಕರಿಸುವೆನು.

## ಸರ್ವಸಾಧು ಪರಮೇಷ್ಠಿಗಳ ಸ್ವರೂಪ

ಈ ಜಂಬೂದ್ವೀಪ, ಧಾತಕೀಖಂಡ ಪುಷ್ಕರಾರ್ಧಗಳೆಂಬ ಎರಡುವರೆ ದ್ವೀಪ ಗಳಲ್ಲಿಯೂ, ಲವಣೋದಕ, ಕಾಲೋದಕವೆಂಬ ಎರಡು ಸಮುದ್ರಗಳಲ್ಲಿಯೂ, ಸ್ಥಿತಿ, ಪರ್ಯಂಕಾಸನ, ವೀರಾಸನ, ಏಕಪಾರ್ಶ್ವ ಮೊದಲಾದ ಆಸನಗಳಲ್ಲಿ ಕುಳಿತವರಾಗಿ ಚತುರ್ಥೋಪವಾಸ, ಅಷ್ಟೋಪವಾಸ, ಪಕ್ಷೋಪವಾಸ. ಮಾಸೋಪವಾಸ ಮೊದ ಲಾದ ಉಪವಾಸವನ್ನು ಮಾಡುವ, ಮೌನದಿಂದ ತ್ರಿಕಾಲಯೋಗಗಳನ್ನು ಮಾಡುತ್ತಾ ಇರುವವರು ಸರ್ವಸಾಧು ಪರಮೇಷ್ಠಿಗಳು.

ಸಮಸ್ತ ಬಾಹ್ಯಾಭ್ಯಂತರ ಪರಿಗ್ರಹಗಳಿಲ್ಲದೆ, ಎಲ್ಲ ವ್ರತ, ಶೀಲಗಳಿಂದ ಅಲಂಕ ತರಾಗಿ ಹಾಗೂ ಮೋಕ್ಷಾಪೇಕ್ಷೆಯಿಂದ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳಿಂದ ಪರಿಪೂರ್ಣರಾದ ಅನಂತಜ್ಞಾನ ಮೊದಲಾದ ಅನಂತಗುಣಗಳಿಗೆ ಆಧಾರಭೂತರಾದ ಮತ್ತು ನಿಜಶುದ್ಧಾತ್ಮದ್ರವ್ಯಸಾಧಕವಾದ ಶುದ್ಧ ಚಾರಿತ್ರವನ್ನು ಸಾಧಿಸುತ್ತಿರುವ ಸರ್ವಸಾಧು ಪರಮೇಷ್ಠಿಗಳಿಗೆ ಮೋಕ್ಷಸಾಧಕವಾದ ಶುದ್ಧ ಚಾರಿತ್ರದ ಪ್ರಾಪ್ತಿ ಗೋಸ್ಕರ ಅವರನ್ನು ' ಣಮೋ ಲೋಏ ಸವ್ವ ಸಾಹೂಣಂ ಎಂಬ ಪದದಿಂದ ನಮಸ್ಕರಿಸುವೆನು.

ಇತಿ ಪಂಚಪರಮೇಷ್ಠಿ ಸ್ವರೂಪಂ ಸಮಾಪ್ತಂ

## ಧ್ಯಾನ ಸ್ವರೂಪ

ಭವ್ಯರೇ! ಲೋಕದಲ್ಲಿ ಪ್ರತಿಯೊಬ್ಬ ಮನುಷ್ಯನು ಸುಖವನ್ನು ಅಪೇಕ್ಷಿಸುತ್ತಾ ನಲ್ಲದೆ ದುಃಖವನ್ನು ಯಾರೂ ಅಪೇಕ್ಷಿಸುವುದಿಲ್ಲ. ಆದರೂ ಸುಖಪ್ರಾಪ್ತಿಯಾಗುವ ಮಾರ್ಗವು ಯಾವುದೆಂದು ವಿಚಾರಿಸುವವರು ಅತಿ ವಿರಳ. 'ಜ್ಞಾನಮಾರ್ಗೇ ಸುಖಪ್ರಾಪ್ತಿಃ' ಎಂಬಂತೆ ಈ ಸುಖವು ಜ್ಞಾನದಿಂದುಂಟಾಗುತ್ತದೆ. ಇದರಲ್ಲಿ ಅಧ್ಯಾತ್ಮಜ್ಞಾನವೆಂತಲೂ ಲೌಕಿಕಜ್ಞಾನವೆಂತಲೂ ಎರಡು ಭೇದಗಳಿವೆ. ತನ್ನಾತ್ಮ ಚಿಂತನೆಯಿಂದ ಅಧ್ಯಾತ್ಮಜ್ಞಾನವು ಲಭಿಸುತ್ತದೆ. ಲೌಕಿಕ ವಸ್ತುಗಳ ಜ್ಞಾನದಿಂದ ಲೌಕಿಕಜ್ಞಾನವು ಪ್ರಾಪ್ತಿಯಾಗುತ್ತದೆ. ಈ ಸಂಸಾರದಲ್ಲಿ ಲೌಕಿಕಜ್ಞಾನದಿಂದಲೂ ಹಲವು ಪ್ರಯೋಜನಗಳಿವೆ. ಆದರೂ ಈ ಜ್ಞಾನವು ಅಧ್ಯಾತ್ಮಜ್ಞಾನಕ್ಕೆ ಎಂದೂ ಸರಿಯಾಗಲಾರದು. ನಾವು ಲೌಕಿಕಜ್ಞಾನದಿಂದ ಒಂದೇ ಭವದಲ್ಲಿ ಕೀರ್ತಿ ಮೊದಲಾದ ಐಶ್ವರ್ಯಗಳನ್ನು ಹೊಂದಿ ಅಲ್ಪಸುಖಿಗಳಾಗಬಹುದು. ಆದರೆ ಈ ಅಧ್ಯಾತ್ಮಜ್ಞಾನ

ದಿಂದ ನಮ್ಮ ಆತ್ಮನಿಗೆ ಭವಭವದಲ್ಲಿಯೂ ಸುಖ–ಶಾಂತಿಯುಂಟಾಗುವುದು. ರಾಗ, ದ್ವೇಷ, ಮೋಹ, ಸ್ವಾರ್ಥಪರತೆ ಹಾಗೂ ಕ್ರೋಧಾದಿ ಅವಗುಣಗಳು ನಮ್ಮ ಆತ್ಮನ ಯಥಾರ್ಥವಾದ ಸುಖವನ್ನು ನಾಶ ಮಾಡುತ್ತವೆ. ಈ ಮೊದಲು ಹೇಳಿದ ರಾಗದ್ವೇಷಾದಿಗಳು ಶಾಂತವಾಗುವುದರಿಂದ ನಮ್ಮ ಆತ್ಮನಿಗೆ ಸುಖ–ಶಾಂತಿ ಪ್ರಾಪ್ತಿಯಾಗುತ್ತದೆ. ಆದರೆ ಲೌಕಿಕಜ್ಞಾನವು ನಿರರ್ಥಕವೆಂದು ಹೇಳುವುದು ಸರಿಯಲ್ಲ. ನಾವು ಲೋಕವ್ಯವಹಾರದಲ್ಲಿಯೇ ಮಗ್ನರಾಗದೆ ಚಿದಾನಂದಮಯವಾದ ಆತ್ಮಧ್ಯಾನದ ಕಡೆಗೆ ಲಕ್ಷ ಕೊಡಬೇಕಾಗಿ ಪ್ರಾರ್ಥನೆ.

ಧ್ಯಾನವೆಂದರೆ ಚಿಂತಿಸುವುದು, ಅಂದರೆ ತನಗಿಷ್ಟವಾದ ಧನ, ಧಾನ್ಯ, ಸ್ತ್ರೀ, ಪುತ್ರ ಮೊದಲಾದುವುಗಳಲ್ಲಿಯೂ ತನಗಿಷ್ಟವಿಲ್ಲದಿರುವ ಶತ್ರು, ವಿಷ, ಕಂಟಕ ಮೊದಲಾದ ವಸ್ತುಗಳಲ್ಲಿಯೂ ರಾಗ–ದ್ವೇಷಗಳನ್ನು ಬಿಟ್ಟು, ರಾಗ ದ್ವೇಷಾದಿಗಳಿಲ್ಲದ ಹಾಗೂ ಪರಮಾನಂದಮಯನಾದ ನಿಜ ಪರಮಾತ್ಮನನ್ನು ಭಾವಿಸುವುದೇ ಧ್ಯಾನವು. ಅಥವಾ ಶುಭಾಶುಭ ಪರಿಣಾಮಗಳಲ್ಲಿ ಓಡಾಡುತ್ತಿರುವ ನಮ್ಮ ಮನಸ್ಸನ್ನು ಆತ್ಮನಲ್ಲಿಯೇ ಸ್ಥಿರಪಡಿಸುವುದು ಧ್ಯಾನವು. ಇದಕ್ಕೆ ಉಪಯೋಗವೆಂದೂ ಹೇಳುತ್ತಾರೆ. ಈ ಉಪಯೋಗವು ಅಶುಭೋಪಯೋಗ, ಶುಭೋಪಯೋಗ ಮತ್ತು ಶುದ್ಧೋಪಯೋಗವೆಂದೂ ಮೂರು ಪ್ರಕಾರವಾಗಿದೆ. ನಮ್ಮ ಆತ್ಮನಿಗೆ ಪಾಪಗಳ ಸಂಬಂಧವನ್ನು ಉಂಟುಮಾಡುವ ಕೊಲೆ, ಹುಸಿ, ಕಳವು, ಕುಶೀಲ ಮತ್ತು ಅತಿಕಾಂಕ್ಷೆಗಳ ವಿಚಾರದಲ್ಲಿ ಮನ–ವಚನ– ಕಾಯಗಳಿಂದ ತೊಡಗುವುದೇ ಅಶುಭೋಪಯೋಗವು ಇದೇ ದುರ್ಧ್ಯಾನವೆನಿಸುವುದು. ಇದರಿಂದ ಆತ್ಮನಿಗೆ ಹೆಚ್ಚು ಹೆಚ್ಚು ಪಾಪ ಬಂಧವಾಗಿ ಇಹ–ಪರಗಳಲ್ಲಿ ನಾವು ದುಃಖಿಗಳಾಗುವೆವು. ಆದುದರಿಂದ ಈ ಅಶುಭೋಪಯೋಗವನ್ನು ಬಿಟ್ಟುಬಿಡಬೇಕು. ಆತ್ಮನಿಗೆ ಪುಣ್ಯವನ್ನುಂಟುಮಾಡುವ, ಉತ್ತಮ ಪದವಿಯನ್ನು ದೊರಕಿಸುವ ಹಾಗೂ ಕರ್ಮವಿಮೋಚನೆಯನ್ನು ಮಾಡುವ ಉಪಯೋಗವೇ ಶುಭೋಪಯೋಗವು. ಇದು ಆತ್ಮನಿಗೆ ಪರಂಪರೆಯಿಂದ ಮೋಕ್ಷಕ್ಕೆ ಕಾರಣವಾದುದರಿಂದ ಸ್ವೀಕರಿಸುವುದಕ್ಕೆ ಯೋಗ್ಯವಾದದ್ದು. ಇದಕ್ಕೆ ಶುಭಧ್ಯಾನ ಅಥವಾ ಧರ್ಮಧ್ಯಾನವೆನ್ನುತ್ತಾರೆ. ಉತ್ತಮವಾದ ಭಕ್ತಿಯಿಂದ ದೇವಪೂಜೆ, ಶಾಸ್ತ್ರಾಧ್ಯಯನ, ಧರ್ಮೋಪದೇಶ ಮೊದಲಾದ ಕಾರ್ಯಗಳು ಶುಭೋಪಯೋಗಕ್ಕೆ ಕಾರಣವಾದವುಗಳು. 'ನಾನು ' ಅಂದರೆ ಆತ್ಮನು ಇಂದ್ರಿಯ, ಶರೀರ, ಪುತ್ರ, ಮಿತ್ರ, ಪತ್ನಿ ಮುಂತಾದ ಬಾಹ್ಯವಸ್ತುಗಳಿಂದ ಬೇರೆಯಾದವನು. ನಾನು ಜ್ಞಾನರ ದರ್ಶನಮಯನು. ನಾನು ಶತ್ರು–ಮಿತ್ರ, ಜನ್ಮ–ಮರಣಾದಿಗಳಿಂದ ರಹಿತನಾದವನು. ಇವೆಲ್ಲಾ ಕರ್ಮಜನಿತವಾದವುಗಳು. ನಾನು ಶುದ್ಧ ಚಿದ್ರೂಪನು'. ಎಂಬುದಾಗಿ ತನ್ನ ಪರಮಾತ್ಮನನ್ನು ಭಾವಿಸುವುದೇ ಶುದ್ಧೋಪಯೋಗವು. ಇದು ಆನಂದಮಯವಾದುದರಿಂದಲೂ ಸಾಕ್ಷಾತ್ ಮೋಕ್ಷಕ್ಕೆ ಕಾರಣವಾಗಿರುವುದರಿಂದಲೂ ಅತಿ ಶ್ರೇಷ್ಠವಾದುದು. ಈ ಗ್ರಂಥದಲ್ಲಿ ಮುಖ್ಯವಾಗಿ ಪರಮಾತ್ಮಧ್ಯಾನದ ವಿಷಯವನ್ನೇ ವರ್ಣಿಸಿದುದರಿಂದ ಇದು ಶುದ್ಧೋಪಯೋಗಕ್ಕೆ ಪ್ರಧಾನ ಕಾರಣವಾಗಿದೆ. ಆದುದರಿಂದ ಯಥಾರ್ಥವಾದ ಪರಮಾತ್ಮಸ್ವರೂಪದಲ್ಲಿ ಶ್ರದ್ಧೆ, ಜ್ಞಾನ ಮತ್ತು ಆಚರಣೆ

ಗಳಿಂದ ಯುಕ್ತರಾಗಿ ಧ್ಯಾನಿಸಿದರೆ, ಅನಾದಿಕಾಲದಿಂದ ನಮಗೆ ಅಂಟಿರುವ ಕರ್ಮ ಗಳು ನಾಶವಾಗಿ ಉತ್ತಮ ಸುಖವು ಪ್ರಾಪ್ತಿಯಾಗುವುದು.

**ಹತಂ ಜ್ಞಾನಂ ಕ್ರಿಯಾಶೂನ್ಯಂ । ಹತಾ ಚಾಜ್ಞಾನಿನಃ ಕ್ರಿಯಾಃ ॥**
**ಧಾವನ್ನಪ್ಯಂಧಕೋ ನಷ್ಟಃ । ಪಶ್ಯನ್ನಪಿ ಚ ಪಂಗುಕಃ ॥**

ಅಂದರೆ ಬೆಂಕಿಯಿಂದ ಉರಿಯುತ್ತಿರುವ ಅರಣ್ಯದ ಮಧ್ಯದಲ್ಲಿ ಅಲ್ಲಿ ಇಲ್ಲಿ ಓಡಾಡುತ್ತಿರುವ ಕುರುಡನು, ನಾಲ್ಕು ದಿಕ್ಕಿನಲ್ಲಿಯೂ ಬೆಂಕಿಯು ಅಪರಿಸುತ್ತಿರಲು ಆತನು ಕಣ್ಣಿಲ್ಲದವನಾದ ಕಾರಣ ಬೆಂಕಿಯಲ್ಲಿಯೇ ಬಿದ್ದು ಸಾಯುವನು. ಹಾಗೆಯೇ ಕುಂಟನು ಇಲ್ಲಿ ಬೆಂಕಿ ಇದೆ, ಇಲ್ಲಿ ರಸ್ತೆ ಇದೆ, ಎಂದು ತಿಳಿದವನಾದರೂ ಓಡಿ ಹೋಗಲು ಕಾಲಿಲ್ಲದೆ ಕುಂಟನಾಗಿರುವುದರಿಂದ ಅಗ್ನಿಯಲ್ಲಿ ಬಿದ್ದು ಮೃತನಾಗುವನು. ಆದುದರಿಂದ ಕೇವಲ ಆತ್ಮಧ್ಯಾನದ ಜ್ಞಾನವಿದ್ದರೆ ಪ್ರಯೋಜನವಾಗಲಾರದು. ಪ್ರತಿನಿತ್ಯವೂ ಒಂದು ಕ್ಷಣವಾದರೂ ಏಕಾಂತಸ್ಥಾನದಲ್ಲಿ ಕುಳಿತು ನಾಸಿಕಾಗ್ರದ ಮೇಲೆ ದೃಷ್ಟಿಯನ್ನಿಟ್ಟು ದೃಢವಾದ ವಿಶ್ವಾಸದಿಂದ ತನ್ನಾತ್ಮನನ್ನು ಧ್ಯಾನಿಸಬೇಕು. ಯಥಾರ್ಥವಾದ ಜ್ಞಾನವಿಲ್ಲದೆ ಅಜ್ಞಾನಿ ತಪಸ್ವಿಗಳಂತೆ ಧ್ಯಾನಿಸಿದರೂ ಪ್ರಯೋಜನವಾಗಲಾರದು. ಆದುದರಿಂದ ಯಥಾರ್ಥವಾದ ಆತ್ಮನ ನಂಬಿಕೆ, ಜ್ಞಾನ ಮತ್ತು ಆಚರಣೆ ಇವುಗಳಿಂದ ಉತ್ತಮವಾದ ಸುಖವು ದೊರೆಯುವುದು. ನಿಮಗೆ ಒಂದೇ ಬಾರಿ ಮೇಲೆ ಹೇಳಿದ ಶುದ್ಧೋಪಯೋಗದಲ್ಲಿ ತಮ್ಮ ಮನಸ್ಸನ್ನು ಸ್ಥಿರೀಕರಿಸುವುದಕ್ಕೆ ಸಾಧ್ಯವಾಗದಿದ್ದರೆ ಕ್ರಮದಿಂದಲಾದರೂ ಪ್ರಯತ್ನ ಮಾಡಬೇಕು.

**ಕ್ರಮತಃ ಕ್ರಮತೋ ಯಾತಿ । ಕೀಟಿಕಾ ಶುಕವತ್ಫಲಂ ॥**
**ನಗಸ್ಥಂ ಸ್ವಸ್ಥಿತಂ ನಾ ಚ । ಶುದ್ಧಚಿದ್ರೂಪಚಿಂತನಂ ॥**

ಕ್ರಿಮಿಯು ಗಿಳಿಯಂತೆ ಒಂದೇ ಸಾರಿ ಫಲದ ಸಮೀಪಕ್ಕೆ ಹಾರಿ ಬಂದು ಫಲವನ್ನು ತಿನ್ನಲಾರದು. ಆದರೆ ಕ್ರಮೇಣ ಭೂಮಿಯಿಂದ ಮರದ ಬುಡಕ್ಕೆ ಬಂದು ಮೆಲ್ಲ ಮೆಲ್ಲಗೆ ಏರುತ್ತಾ ಫಲದ ಸಮೀಪವನ್ನು ಹೊಂದಿ, ನಂತರ ಫಲದ ರಸಾಸ್ವಾದನೆಯನ್ನು ಹೇಗೆ ಮಾಡುವುದೋ, ಅದೇ ಪ್ರಕಾರವಾಗಿ ಈ ಶುದ್ಧ ಚಿದ್ರೂಪನಾದ ಆತ್ಮನ ಧ್ಯಾನವು ಒಂದೇ ಸಾರಿ ಸಾಧ್ಯವಾಗಲಾರದು, ಆದರೆ ಕ್ರಮದಿಂದ ಪತ್ನಿ, ಪುತ್ರ, ಮಿತ್ರಾದಿಗಳ ಮಮತೆಯನ್ನು ಬಿಟ್ಟು ಆತ್ಮನನ್ನು ಚಿಂತಿಸಿದರೆ ಧ್ಯಾನವು ಸಾಧ್ಯವಾಗುವುದು. ಇದನ್ನು ಬಾಲಕನೂ ತರುಣನೂ ಧನಿಕನೂ ದರಿದ್ರನೂ ಶಕ್ತಿವಂತನೂ ಶಕ್ತಿ ಇಲ್ಲದವನೂ ರೋಗಿಯೂ ನಿರೋಗಿಯೂ ಎಲ್ಲರೂ ಮಾಡಬಹುದು. ಇದು ಕೇವಲ ಮುನಿಗಳಿಗೆ ಯೋಗ್ಯವಾದದ್ದು, ನಮಗೆ ಸಾಧ್ಯವಾಗತಕ್ಕದ್ದಲ್ಲವೆಂಬುದಾಗಿ ತಿರಸ್ಕರಿಸಬಾರದು. ಯಾಕೆಂದರೆ?

ಅಂತಸ್ತತ್ವಂ ವಿಶುದ್ಧಾತ್ಮಾ । ಬಹಿಸ್ತತ್ವಂ ದಯಾಂಗಿಷು ॥
ದ್ವಯೋಸ್ಸಮಿಲನೇ ಮೋಕ್ಷಃ । ತಸ್ಮಾತ್ ದ್ವಿತಯಮಾಶ್ರಯೇತ್ ॥

ಅಂತಸ್ತತ್ವವೆಂದರೆ ಪರಿಶುದ್ಧನಾದ ಆತ್ಮ. ಸರ್ವಪ್ರಾಣಿಗಳ. ಮೇಲೆ ದಯಾಪರಿಣಾಮವನ್ನಿಡುವುದೇ ಬಹಿಸ್ತತ್ವ, ಈ ಎರಡು ತತ್ತ್ವಗಳ ಸಂಬಂಧದಿಂದ ಮೋಕ್ಷವು ದೊರೆಯುತ್ತದೆ. ಅಂದರೆ ಎಲ್ಲಾ ಪ್ರಾಣಿಗಳ ಮೇಲೆ ಮಿತ್ರತ್ವ ಯಾ ದಯೆಯನ್ನಿಡುವುದರಿಂದ ಈ ಅತ್ಮನಿಗೆ ಶುದ್ಧಾತ್ಮ ಧ್ಯಾನದ ಸಿದ್ಧಿಯಾಗುತ್ತದೆ, ಆದುದರಿಂದ ಎಲ್ಲಾ ಪ್ರಾಣಿಗಳಲ್ಲಿ ಪ್ರೇಮವನ್ನಿಡುವುದರಿಂದ ಧ್ಯಾನವು ಸಿದ್ಧಿಯಾಗುವುದು. ಈ ಪ್ರಕಾರವಾದ ಧ್ಯಾನವನ್ನು ಯಾರು ತಾನೆ ಮಾಡಲು ಸಾಧ್ಯವಿಲ್ಲ? ಎಲ್ಲರೂ ಮಾಡಬಹುದು. ಆದುದರಿಂದ ಈ ಎರಡು ಪ್ರಕಾರವಾದ ಧ್ಯಾನವನ್ನು ಭಾವಿಸಿದರೆ ನಿಃಸಂದೇಹವಾಗಿ ಸಂಸಾರದ ಬವಣೆಯು ನಾಶವಾಗಿ ಮೋಕ್ಷವು ಪ್ರಾಪ್ತಿಯಾಗುವುದು.

ಸಂಪೂರ್ಣಂ

---

# ಕಾರ್ಕಳದ ಗೊಮ್ಮಟಸ್ವಾಮಿಯ ಮಹಾಮಸ್ತಕಾಭಿಷೇಕ

ಕಾರ್ಕಳದ ಗೊಮ್ಮಟ ವಿಗ್ರಹವನ್ನು ಕುರಿತು ತುಳು ನಾಡಿನ ಕನ್ನಡ ಕವಿಯಾದ ಚದುರ ಚಂದ್ರಮನು **'ಮದನಾರಿ ಗುಮ್ಮಟಸ್ವಾಮಿಯ ಚರಿತೆ'** ಎಂಬ ಕಾವ್ಯವನ್ನು ಸಾಂಗತ್ಯದಲ್ಲಿ ಬರೆದಿದ್ದಾನೆ.

ಇಲ್ಲಿ ಈ ಕಾವ್ಯದ ಕೊನೆಯ ಎರಡು ಆಶ್ವಾಸಗಳಲ್ಲಿರುವ ಮಸ್ತಕಾಭಿಷೇಕದ ವೃತ್ತಾಂತ ವರ್ಣನೆಯನ್ನು ಜ್ಞಾಪಿಸಿಕೊಳ್ಳುತ್ತಿದ್ದೇವೆ.

ಕಾರ್ಕಳದಲ್ಲಿ ಶ್ರೀ ಗೊಮ್ಮಟ ಜಿನನನ್ನು ಕಡಸಿ ನಿಲ್ಲಿಸಿದ ವೀರಪಾಂಡ್ಯನ ಅನ್ವಯದಲ್ಲಿ ನೀತಿನಿಪುಣರಾದ ಅನೇಕ ಭೂಪಾಲರು ಹುಟ್ಟಿ ಧರ್ಮಕೀರ್ತಿಯನ್ನು ಪಡೆದರು. ಅಲ್ಲಿಂದ ಬಳಿಕಣ ದೊರೆಗಳಲ್ಲಿ ಶ್ರೀ ವೀರನರಸಿಂಹ ಬಂಗ ರಾಜೇಂದ್ರನಿಗೂ ಆತನ ಅರಸಿ ಗುಮ್ಮಟಾಂಬಿಕೆಗೂ ಮಗನಾಗಿ ಇಮ್ಮಡಿ ಭೈರವರಾಯನು ಹುಟ್ಟಿದನು. ಇವನು ಸಮರಗಾಂಗೇಯನೆಂದು ವಿಖ್ಯಾತನಾದವನು. ಅರಿರಾಯಗಂಡರ ದಾವಣಿ ಎಂಬುದು ಇವನ ಬಿರುದು. 'ಇವ ಧರ್ಮಾರ್ಥಕಾಮ ಶಾಸ್ತ್ರಗಳ ತುರಂಗವನೇರೆ ಬಲ್ಲ ಜಾಣ.' ಇವನೆ 'ಪಟ್ಟಪೊಂಬುಜದ ಪುರವರಾಧೀಶ್ವರ ಪಟ್ಟದ ದೊರೆ ಭೈರವೇಂದ್ರ.'

ಶ್ರೀ ವೀತರಾಗನಲ್ಲದೆ ಜಗದೊಳು ಮಿಕ್ಕ।
ದೇವತೆಗೇಳುವನಲ್ಲ ॥
ಆವ ಕಲೆಯೊಳು ನೋಡಿದರವಗಿದಿರಿಲ್ಲ।
ಕೋವಿದ ರಣರಂಗಮಲ್ಲ ॥

ಆತನ ತಂದೆ ಭೈರವರಾಯನಿಗೆ ಪುಣ್ಯಖ್ಯಾತಿಗಳಾಗಲಿ ಎಂದೆನ್ನುತ್ತ ನೂತನ ಜನ್ಮಾಭಿಷೇಕವನ್ನು ಗುಮ್ಮಟರಾಯನಿಗೆ ಮಾಡಿಸಿದನು. ಭೂರಿವೈಭವದಿಂದ ಕ್ಷೀರಾಭಿಷೇಕವನ್ನು ಮಾಡಿಸಿ, ಹಿಡಿ ಹೊನ್ನು ಪಟ್ಟೆಯ ಹಚ್ಚಡಗಳನ್ನು ಅಡಿಗೆ ಸಮರ್ಪಿಸಿದನು. ಮುನಿತಿಲಕನಾದ ಮಹೇಂದ್ರಕೀರ್ತಿಯ ಸಮ್ಮುಖದಲ್ಲಿ ಅಬ್ಧಿಸಮಾನಗಂಭೀರವೆನ್ನಿಸುವ ಪುಣ್ಯ ಲಬ್ಧಿಸಾರವನ್ನು ಹೇಳಿಸಿ ಕೇಳಿದನು.

ಕಲಿಕಾಲದೋಷದಿಂದ ಆ ಗುಮ್ಮಟೇಶನಿಗೆ ಕೆಲವು ದಿವಸ ಪರಿಯಂತ ಪೂಜೆ ಖಿಲವಾಗಿ ಅಂತರಿಸಲು, ಭೂಪನ ಕುಲಗುರುವಾದ ಲಲಿತಕೀರ್ತ್ಯಾಚಾರ್ಯರು ಅದನ್ನು ಜ್ಞಾಪಿಸಿದರು. ಆಗ ಗುಮ್ಮಟಜಿನನಿಗೆ ಪ್ರತಿಷ್ಠೆಯನ್ನು ಆಗುಮಾಡಿಸಬೇಕೆಂದು ಆ ಗುರುವಿನ ಕೂಡೆ ಆಲೋಚನೆ ಮಾಡಲು ಆ ಗುರು ಇಂತೆಂದರು: 'ಎಲೆ ಭೈರವರಾಯ, ಭವ್ಯಜನಗಳಿಗೆ ಒಲಿದು ಪುಣ್ಯವ ಮಾಡಿ ಕೊಟ್ಟು ಸಲಹಬೇಕು. ಈ ಪ್ರತಿಷ್ಠೆಗೆ ಅಪ್ಪಣೆ ಕೊಟ್ಟು ನನ್ನ ಅಭೀಷ್ಟವನ್ನು ಸಲ್ಲಿಸಬೇಕು.' ಆದಕ್ಕೆ ಆ ದೊರೆ 'ದೇವರ ವಚನವನ್ನು ಮೀರುವುದು ನಮಗೆ ಯಾವ ವಿವೇಕ? ದೇವರ ಚಿತ್ತಕ್ಕೆ ಬಂದಂತೆ ಮಾಡಬಹುದು. ಪರರು ಒಟ್ಟಿದ ಅಗ್ನಿಯನ್ನು ಹಾಯ್ದರೂ ತನ್ನ ಶೀತವು ಪರಿಹಾರವಾಗದೆ! ಅದರಂತೆ ಗುರು! ನೀವು ಹೇಳಿದಂತೆ ಮಾಡಿದರೆ ನನಗೆ ಪುಣ್ಯ ದೊರಕೊಳ್ಳ

ದಿರುವುದೆ! ಕೃತ, ಕಾರಿತ, ಅನುಮೋದನ ಎಂದು ಪುಣ್ಯ ಕಾರಣಗಳು ಮೂರು ತೆರ. ನೀವು ಹೇಳಿದಂತೆ ಕಾರಿತದಿಂದ, ಅನುಮತಿಯಿಂದ ಪುಣ್ಯ ದೊರಕದೆ!' ಎಂದು ಐದು ನೂರು ಹೊನ್ನನ್ನು ತಂದು ಗುರುವಿನ ಕೈಯಲ್ಲಿಟ್ಟು, 'ಮುಂದೆ ಬೇಕಾದ ಸಹಾಯ ವನ್ನು ಮಾಡುವೆನು' ಎಂದು ಅವರ ಅಡಿಗೆರಗಿದನು.

ಪಾಂಡ್ಯಪುರದಲ್ಲಿ ಆ ಯತಿರಾಜನು ಅರುವತ್ತು ದಾನಸಾಲೆಗಳನ್ನು ಕಟ್ಟಿಸಿದನು. ನೆರೆದ ಜನಕ್ಕೆ ಪಡಿಪಾನಕ್ಕೆಂದು ಹನ್ನೆರಡು ಉಗ್ರಾಣಿಗಳನ್ನು ಮಾಡಿಸಿದನು. ನೇಮಿ ಜಿನೇಶನ ಚೈತ್ಯಗೃಹಕ್ಕೆ ಹೋಗಿ, ನೇಮದಿಂದ ಅಭಿಷೇಕ ವಿಧಿಯನ್ನು ಮಾಡಿ, ಪೂಜೆ ಯಾದ ಬಳಿಕ ಪ್ರೇಮಭಕ್ತಿಯಿಂದ 'ಸ್ವಾಮಿ, ಲೋಕಕ್ಕೆಲ್ಲ ಕ್ಷೇಮವಾಗಲೆಂದು ತೊಡ ಗಿದ ಈ ಕಾರ್ಯಕ್ಕೆ ನಿರ್ವಿಘ್ನವನ್ನುಂಟುಮಾಡು. ನಿನ್ನ ಕೃಪೆಯಿದ್ದರೆ ಕೈವಲ್ಯ ಕೂಡ ಕೈಗೂಡುವುದು, ಶತ್ರುಗಳೂ ಮಿತ್ರರಾಗುವರು. ನನ್ನ ಅಭಿಮತವನ್ನು ಸಲ್ಲಿಸಿಕೊಡುವ ಭಾರ ನಿನ್ನದು. ಬಾಲಕನಾದ ನನ್ನ ಬಿನ್ನಹವನ್ನು ಮನ್ನಿಸಬೇಕು' ಎಂದು ಪ್ರಾರ್ಥಿಸಿ ಕೊಂಡು, ಉಭಯ ಲೋಕಕ್ಕೆ ಹಿತವಾಗುವ ಪ್ರತಿಜ್ಞೆಯನ್ನು ಶುಭಮುಹೂರ್ತದಲ್ಲಿ ಮಾಡಿದನು. ಗುಮ್ಮಟಸ್ವಾಮಿಯ ಪೂಜೆಯಾಗುವ ವರೆಗೂ ಚಾಮರ, ಛತ್ರಿ ಪಲ್ಲಕ್ಕಿ ಮೊದಲಾದ ರಾಮಣೀಯಕ ಚಿಹ್ನೆಗಳನ್ನು ಬಿಟ್ಟೆನೆಂದು ಪ್ರತಿಜ್ಞೆ ಮಾಡಿದನು. ದೇವನ ಎದುರೆಗೆ ಸಾಕ್ಷಿಯಾಗಿ, ಭಕ್ಷ್ಯ, ಪಾಯಸ ಇವುಗಳೊಳಗೆ ಇಷ್ಟಿಷ್ಟು ಎಂದು ಪ್ರತಿಜ್ಞೆ ಮಾಡಿ ತೊರೆದನು. ಮುನಿರಾಯನು ಅಲ್ಲಿಂದ ಮುಂದೆ ಬೆಟ್ಟದ ಬ್ರಹ್ಮದೇವರ ಮುಂದೆ ಬಂದು ಆತನ ಸಹಾಯವನ್ನೂ ಪ್ರಾರ್ಥಿಸಿದನು. ಅಲ್ಲಿ ನಿಂತು ಹುಂಬುಚದ ಅಂಬಿಕೆಗೂ ಹಾಗೇ ಪ್ರಾರ್ಥನೆ ಮಾಡಿಕೊಂಡನು.

ಹತ್ತು ಸಾವಿರ ಕುಂಭಗಳನ್ನು, ಮತ್ತೆ ಕೆಲವು ಭಾಜನಗಳನ್ನು, ಉತ್ತಮವಾದ ಅಂಕುರ ಭಾಜನಗಳನ್ನು ಮಾಡಿಸಿದನು. ಕರ್ಮಕ್ಷಯಾರ್ಥವಾಗಿ ಧರ್ಮಚಕ್ರವನ್ನೂ ಪದ್ಮಯಾನವನ್ನೂ ಷೋಡಶಸ್ವಪ್ನ ಸಂತತಿಯನ್ನೂ ಸಮವಸರಣವನ್ನೂ ಬರೆಸಿದನು. ಧ್ವಜಪಟಗಳಲ್ಲಿ ದಿಕ್ಕನ್ನಿಕೆಯರ ದಿಕ್ಪಾಲಕರ ಗಜಗರುಡಾದಿ ವಾಹನಗಳ ಚಿತ್ರಗಳನ್ನು ಬರೆಸಿದನು ಮಂಟಪಗಳನ್ನು ಮುಂಚೆ ಮಾಡಿಸಿ, ಕೈಕರಣವನ್ನು ಬಲ್ಲ ಆಚಾರ್ಯರು ಗಳಿಂದ ಕುಂಡವೇದಿಕೆಯನ್ನೆತ್ತಿಸಿದನು. ಬಡಗಿ ಕಮ್ಮಾರರ ಮೋಪನ್ನು ತರಿಸಿದನು, ಕಪಿನಿ ಬಾಣಗಳನ್ನು ಜಡಿಸಿದನು, ಕಡಿಸಿ ಧ್ವಜಸ್ತಂಭವನ್ನು ತರಿಸಿದನು.

ಅನಂತರ ಆ ಮುನಿಪತಿಯು ತರಿಸಿದ ಮರಗಳನ್ನು ಬೆಟ್ಟಕ್ಕೆ ಎಯ್ದಿಸಿ ಅಟ್ಟ-ಳಿಗೆಯನ್ನು ವಿರಚಿಸುವಂತೆ ಕಟ್ಟುಮಾಡಿದನು. ಅಟ್ಟಳಿಕೆ ಎದ್ದಿತು. ಅದರ ಮೇಲೆ ಹೊಂದಾವರೆಯ ಮೊಗ್ಗಿನಂತೆ ಕಳಸ ಒಪ್ಪಿತು. ಸಮವಸರಣದಂತೆ ನವ ರಂಗ ಸೊಗಸಾಯಿತು. ಏಳು ನೆಲೆಯ ಅಟ್ಟಳಿಗೆಯ ಮೇಲೆ ಬಾವುಟಗಳು ಗಾಳಿ-ಯಲ್ಲಿ ಹಾರಾಡಿದವು. ನೆಲೆ ನೆಲೆಗೆ ಇಟ್ಟ ನಿಚ್ಚಣಿಗೆಗಳು ಮೋಕ್ಷಪದವಿಗೆ ಇಟ್ಟ ನಿಶ್ರೇಣಿಯಂತೆ ಕಂಗೊಳಿಸಿದವು. ಹಸುರಡಕೆಗಳು ಹಣ್ಣಡಕೆಗಳು ಸುತ್ತಿ ಹೊಸ ದಾದ ಕಂಭ ಪಚ್ಚೆಯ ಪದ್ಮರಾಗದ ಮಣಿಗಳಿಂದ ಕೆತ್ತಿದ ಹಾಗಿತ್ತು. ಪುರದಲ್ಲಿ ಎಲ್ಲೆಲ್ಲಿ ನೋಡಿದರೂ, ಅಲ್ಲಲ್ಲಿ ಮಕರತೋರಣಗಳು, ಅಲ್ಲಲ್ಲಿ ಗುಡಿತೋರಣಗಳು,

ಅಲ್ಲಲ್ಲಿ ಕುರುಜು ಪತಾಕೆಗಳು. ಮನೆಮನೆಗಳ ಮುಂದೆ ಚಪ್ಪರಗಳು, ಅವಕ್ಕೆ ಅನುಪಮವಾದ ಪಟ್ಟೆಜಲ್ಲಿಗಳು. ಮನೆಮನೆಯಲ್ಲೂ ನೇತ್ರಾನಂದವಾಗುವಂತೆ ಚಿತ್ರಗಳನ್ನು ಬರೆಸಿದರು. ಪಾತ್ರದಾನಕ್ಕಾಗಿ ವಿಚಿತ್ರವಾದ ವಸ್ತುಗಳನ್ನು ಸಂಪಾದಣೆ ಮಾಡಿದರು. ಪಾಂಡ್ಯಪುರ ಕುಬೇರನ ಪಟ್ಟಣವಾಯಿತು.

ಭವ್ಯಜನರು ಬೇಳೆ, ಬೆಲ್ಲ, ಗೋಧಿ, ಕಡಲೆ, ತುಪ್ಪ, ಹಪ್ಪಳ, ಸಣ್ಣಕ್ಕಿ, ಶಾಕ ಪಾಕಗಳನ್ನು ಸೌರಣೆಮಾಡಿದರು. ಬರುವ ಜನ ವಿಶ್ರಮಿಸುವುದಕ್ಕಾಗಿ ಮೇಲ್ಕಟ್ಟು ಕಟ್ಟಿಸಿ, ಆ ಮುನಿರಾಯನು ಅಲ್ಲಲ್ಲಿಗೆ ಚಪ್ಪರಗಳನ್ನು ಮಾಡಿಸಿದನು. ಮೊದಲೇ ಎಲ್ಲ ಸೌರಣೆ ಬಂದು, ಹನ್ನೆರಡು ಉಗ್ರಾಣದ ಮನೆ ತುಂಬಿತು. ಎಣ್ಣೆಯ ಹಾಡಗಳು, ತುಪ್ಪದ ಹಾಡಗಳು ಬಹು ಬಹು ಬಣ್ಣದ ಧಾನ್ಯರಾಶಿಗಳು, ಸಣ್ಣಕ್ಕಿಯ ರಾಶಿ, ಸಕ್ಕರೆಯ ರಾಶಿ ಕಣ್ಣು ಕೋರೈಸುತ್ತಿತ್ತು. ನಾಳಿಕೇರದ ರಾಶಿ, ಬೆಲ್ಲದ ರಾಶಿ, ಬಾಳೇಹಣ್ಣ ಗೊನೆಗಳು, ಮೇಲೋಗರದ ಕಾಯಿಗಳ ರಾಶಿಯೇ ರಾಶಿ. ಮೆಣಸು, ಉಪ್ಪು, ಹುಳಿ ಮುಂತಾದ ಸನ್ನಹಕ್ಕೆ ಗಣನೆಯೇ ಇಲ್ಲ. ಹಣ ಹೊನ್ನು ತೃಣಕ್ಕೆ ಎಣೆಯಾಯಿತು.

ಜವಳಿಯಂಗಡಿ, ಮುತ್ತಿನಂಗಡಿ, ರತ್ನದಂಗಡಿ, ವಿವಿಧವಾದ ತಾಮ್ರದ, ಕಂಚಿನ ಉಪಕರಣಗಳ ಅಂಗಡಿ ಎಲ್ಲಿ ನೋಡಿದರೂ. ದಿಕ್ಕುದಿಕ್ಕಿನ ಬೀದಿಗಳ ಎರಡು ಕಡೆಗಳಲ್ಲಿ ಎಲ್ಲಿ ನೋಡಿದರೂ ಅಕ್ಕಿಯ ರಾಶಿ, ಮೇಲೋಗರದ ಕಾಯಿಗಳ ಚೊಕ್ಕಟ ವಾದ ರಾಶಿ!

ಓಲೆಯನ್ನು ಕಳುಹಿಸಿ, ದೇಶದೇಶದ ಭವ್ಯ ಸಮೂಹವನ್ನು ಬರಿಸಿದನು. ಸಾಲು ದಂಡಿಗೆ, ಛತ್ರ-ಚಾಮರದಿಂದ ಪುಣ್ಯಶೀಲಾಚಾರ್ಯರೂ ಬಂದರು. ಅವರವರಿಗೆ ತಕ್ಕ ವಿನಯೋಪಚಾರದಿಂದ ಅವರನ್ನು ಎದುರುಗೊಂಡು, ಸುವಿವೇಕಿಯಾದ ಆ ಮುನಿ ರಾಯನು ವಿವಿಧ ವಿಭವದಿಂದ ಅವರನ್ನು ಕರೆತಂದನು. ಶ್ರಾವಕರಿಗೆ ಶ್ರಾವಕರನ್ನು ಕಳಿಸಿ, ವಿಭವದಿಂದ ಇದಿರುಗೊಳಿಸಿ ಬಿಡಾರಕ್ಕೆ ತಾವನ್ನು ಮಾಡಿಕೊಡಿಸಿದನು.

ಹೀಗೆ ಆ ಮುನಿನಾಥನು ನಾನಾ ತೆರದಿಂದ ಸನ್ನಾಹವನ್ನು ಮಾಡಿ ಮದನಾರಿ ಗುಮ್ಮಟಸ್ವಾಮಿಯ ಪ್ರತಿಷ್ಠೆಯನ್ನು ತಾನು ತೊಡಗಿಸಲು ಧ್ಯಾನಿಸಿದನು.

ತ್ರಿಭುವನ ಗುರುವಾದ ನೇಮಿನಾಥನಿಗೆ ಮೊದಲು ಅಭಿಷೇಕ ಮಾಡಿ, ಶುಭ ಮುಹೂರ್ತದಲ್ಲಿ ಪ್ರತಿಷ್ಠೆಯ ಪ್ರಾರಂಭಕ್ಕೆ ಭೇರೀ ಘೋಷಣೆಯನ್ನು ಮಾಡಿಸಿದನು. ಪುರದಲ್ಲಿ ಜಯಘಂಟೆ ದುಂದುಭಿ ಮೊಳಗಿತು. ಭವ್ಯಸಂಘ ಜಯಜಯ ಎಂದಿತು. ಯತಿಗಳು ನಯನೀತಿಯಿಂದ ವಿಘ್ನನಿವಾರಣಕ್ರಿಯೆ ಮಾಡಿದರು. ಆ ಉತ್ಸವದ ಆದಿ ಯಲ್ಲಿ ಮುನಿರಾಯನು ಪೂಜಾಚಾರ್ಯನನ್ನು ಸಂತೋಷದಿಂದ ಮನ್ನಿಸಿದನು. ನೇಮಿ ಜಿನೇಶನ ಚೈತ್ಯಾಲಯಕ್ಕೆ ಮತ್ತೆ ಆ ಮಹಾಜನರನ್ನು ಕರೆಸಿ, ಪ್ರೇಮದಿಂದ ಹೇಳಿದನು 'ನಾನು ಬಲ್ಲವನಲ್ಲ, ವಿಧಿಗಳನ್ನು. ಕಾಲವೆಂಬುದು ಬಲು ವಿಷಮ. ನೀವೆಲ್ಲ ಅನು- ಕೂಲವಾಗಿ ಈ ಉತ್ಸವವನ್ನು ನಡೆಸಬೇಕು.' ಇಂದ್ರರಲ್ಲಿ ಉತ್ತಮನೆನಿಸುವ ಶ್ರೀ

ನಾಗಚಂದ್ರನನ್ನು ಕರೆದು ತಕ್ಕೈಸಿ, 'ನಿನ್ನಿಂದ ಜಿನಚಂದ್ರನ ಉತ್ಸವವಾಗಬೇಕು' ಎಂದರೆ, ಆತನು 'ದೇವರ ಕಾರುಣ್ಯದಿಂದ ಬಲ್ಲ ಹಾಗೆ ನಾವು ಮಾಡುವೆವು' ಎನ್ನಲು, ಅದಕ್ಕೆ ಬೇಕಾದ ಸಾಮಾಗ್ರಿಗಳನ್ನು ತಾನು ತಾಳುವದೆ ತರಿಸಿದನು.

ಮಾರನೆಯ ದಿನ ಇಂದ್ರಪ್ರತಿಷ್ಠೆಯನ್ನು ತಾನು ಮಾಡಿಸಬೇಕೆಂದು, ಪ್ರೇಮ ದಿಂದ ಪಲ್ಲಕ್ಕಿ ಛತ್ರ ಚಾಮರ ವಾದ್ಯಸ್ತೋಮವನ್ನು ಕಳಿಸಿದನು. ಕಳಸಕನ್ನಡಿ ಹಿಡಿದು ಮುತ್ತೈದೆಯರು ತಳಿಯ ನೆಳಲಿನಲ್ಲಿ ಧವಳ ಶೋಭನಗಳನ್ನು ಹಾಡುತ್ತ ನಡೆದರು. ಪಲ್ಲಕ್ಕಿಯಲ್ಲಿ ಕುಳಿತು ಇಂದ್ರನು ಮುನಿಪನಿದ್ದಲ್ಲಿಗೆ ಬಂದನು. ಅವನನ್ನು ಚದುರೆಯರು ಇದಿರುಗೊಂಡು, ಹಸೆಯನ್ನು ಬರೆದ ಮಂಟಪದಲ್ಲಿ, ಹಸೆಮಣೆಯ ಮೇಲೆ ಕುಳ್ಳಿರಿಸಿ, ಶೋಭನಗಳನ್ನು ಹಾಡಿ, ಸೇಸೆಯಿಕ್ಕಿ, ಆರತಿ ಬೆಳಗಿ, ಕುಲಸತಿಯರು ಎಣ್ಣೆಯೊತ್ತಿ ಸ್ನಾನ ಮಾಡಿಸಿದ ಬಳಿಕ; ಆ ಪಟ್ಟದಿಂದ್ರನಿಗೆ ಮುನಿರಾಯನು ಪಟ್ಟೆಯ ಹಚ್ಚಡ ಧೋತ್ರ ಮುಂಡಾಸ ಕುಂಡಲಗಳನ್ನು ಕೊಟ್ಟು ಕಂಕಣವನ್ನು ಕಟ್ಟಿದನು. ಉಡಿದಾರ ಮುದ್ರಿಕೆ ಹೊನ್ನುಂಗುರ ಚಿನ್ನದ ಯಜ್ಞಸೂತ್ರಗಳನ್ನು ಮಂತ್ರಪೂರ್ವಕವಾಗಿ ಕೊಡಿ-ಸಿದನು. ಈ ರೀತಿ ಹತ್ತುಮಂದಿಗೆ ಉದಾರವಾಗಿ ಕೊಟ್ಟು, 'ನಮ್ಮ ಅಭೀಷ್ಟವನ್ನು ಪೂರೈಸಿಕೊಡಬೇಕು' ಎಂದು ಕಾರುಣ್ಯದಿಂದ ಹರಸಿದನು.

ಅಂದಿನ ರಾತ್ರಿ ಆ ಮುನಿಪತಿ ಸಂಹಿತೆಯಲ್ಲಿ ಹೇಳಿದಂತೆ ಸಾಕಲ್ಯವಾಗಿ ನಾಂದೀ ಮಂಗಳ ವಿಧಿಯನ್ನು ಚಂದದಿಂದ ಮಾಡಿಸಿದನು. ಸ್ತಂಭವನ್ನೆತ್ತಿಸಿ, ಧ್ವಜಪೀಠವನ್ನು ಅವಷ್ಟಂಭಿಸಿ ಧ್ವಜವನ್ನೆತ್ತಿಸಿದನು. ದಿಕ್‌ಕನ್ನಿಕೆಯರ ದಿಕ್‌ಪಾಲಕರ ಧ್ವಜಗಳನ್ನು ದಿಕ್ಕುದಿಕ್ಕಿನಲ್ಲು ಎತ್ತಿಸಿದನು. ಅದರಲ್ಲಿ ಪೂರ್ವಮುಖವಾಗಿ ನಿಂತಂಥ ಮುಖ್ಯಧ್ವಜಕ್ಕೆ ಕದಳಿಯ ಕಂಭ ತೋರಣ ಝಲ್ಲಿ ಪತಾಕೆ ಕಬ್ಬುಗಳನ್ನು ನಿಲ್ಲಿಸಿ ದರ್ಭೆಯ ಮಾಲೆ ಯನ್ನು ಸುತ್ತಿಸಿದನು. ಪಲ್ಲಕ್ಕಿಯಲ್ಲಿ ಸರ್ವಾಹ್ಣ ಯಕ್ಷನನ್ನಿಟ್ಟು ಪುರದೊಳಗೆ ಉತ್ಸವ ಮಾಡಿಸಿದನು. ಆಲಿವಟ್ಟಲು ಸೂರಿಯಪಾನ ಚಾಮರ ಸಾಲುಪಂಜು ಹಿಲಾಲು ಓಲಗಿ ಸುವ ನಾನಾವಾದ್ಯ ತಾಳ ಮದ್ದಳೆ ಕಹಳೆ! ಆಕಾಶಬಾಣ ಬಿರಿಸು ಕದನಿಯ ದನಿ! ಎರಡು ಹೊತ್ತಿನಲ್ಲೂ ಶ್ರೀ ಕಾರ್ಕಳದ ಉತ್ಸವದ ಪ್ರಭಾವನೆ ಹೀಗೆ ಸಂಭ್ರಮದಿಂದ ನಡೆಯಿತು.

ಮತ್ತೆ ಮಾರನೆಯ ದಿವಸ ಅಂಕುರಗಳನ್ನು ಬಿತ್ತಿಸುವುದಕ್ಕೆ ಶುದ್ಧವಾದ ಮೃತ್ತಿಕೆ ಗಳ ಸಂಗ್ರಹವನ್ನು ಉತ್ತಮ ಮುನಿಗಳಿಂದ ಮಾಡಿಸಿದನು. ಪಟಲ ಪಾಲಿಕೆ ಶರಾವೆ ಘಟ ಇವುಗಳನ್ನು ಸ್ಫುಟವಾದ ವೇದಿಕೆಯಲ್ಲಿ ಪಟುತರವಾದ ಭಕ್ತಿಯಿಂದ ಸ್ಥಾಪಿಸಿ ದನು. ಹದಿನೆಂಟು ತೆರದ ಧಾನ್ಯಗಳನ್ನು ತರಿಸಿ, ಮತ್ತೆ ಅದನ್ನು ಪಕ್ವಾಳನಗೈಸಿ, ಸುದತಿ ಯರು ಸಿಂಗಾರವಾಗಿ ಬರುವಂತೆ ಡಂಗುರ ಹೊಯ್ಸಿದನು. ಮೊದಲೇ ಬಂದಿದ್ದ ನಾನಾ ದೇಶದ ಕುಲಸುದತಿಯರು ಶೃಂಗಾರವಾಗಿ ಬಂದರು. ಗುರು ಅವರನ್ನು ಹರಸಿ, ಧಾನ್ಯ ವನ್ನು ಚಿನ್ನದ ಹರಿವಾಣದಲ್ಲಿಟ್ಟು, ಅವರ ಕೈಯಲ್ಲಿ ಕೊಟ್ಟು, ಪುಣ್ಯಾಂಕುರದ ಬೀಜ ವನ್ನು ಬಿತ್ತಿಸುವಂತೆ ಆ ಪುಣ್ಯಾಂಗನೆಯರ ಕೈಯಿಂದ ಮಂತ್ರಪೂರ್ವಕವಾಗಿ ಬಿತ್ತಿಸಿ ದನು. ಇಂಥ ಸಾವಿರ ಮಂದಿ ಮುತ್ತೈದೆವೆಣ್ಗಳಿಗೆ ಆ ಮುನೀಂದ್ರನು ದೇವಾಂಗವಸ್ತ್ರ

ರವಿಕೆಗಳನ್ನು ದಕ್ಷಿಣೆ ಸಹಿತ ಕೊಟ್ಟು ಸಂಭಾವಿಸಿದನು. ಕಡಲೆ ತೆಂಗಿನಕಾಯಿ ಕಬ್ಬಿನ ಕಂಡಿಕೆ ಮಡಿಲಕ್ಕಿ ಬಾಳೆಯಹಣ್ಣು ಅಡಕೆಲೆಗಳ ತುಂಬಿ ಕನಕಭಾಜನದಲ್ಲಿ ಬಾಗಿನ ಕೊಡಿಸಿದನು. ಅವರೆಲ್ಲರಿಗೆ ಆಶೀರ್ವಾದ ಮಾಡಿ ಕಳುಹಿ, ಅನಂತರ ಬಿಂಬ ಶುದ್ಧಿಯನ್ನು ಮಾಡಲು ಹವಣಿಸಿದನು.

ಮುದದಿಂದ ಕಲಶನ್ಯಾಸವನ್ನು ಮಾಡಿಸಿ, ವಿನ್ಯಾಸವನ್ನು ಅರಿತು ನೂರ ಹದಿಮೂರು ಕಲಶಗಳೊಳಗೆ ಸದಮಲ ಸರ್ವೌಷಧಿ ಜಲವನ್ನು ತುಂಬಿಸಿದನು. ಧಾಮ ಶುದ್ಧಿಗೆ ಧಾಮವಿಲ್ಲದುದರಿಂದ ಆ ಸರ್ವೌಷಧಿ ಜಲದಿಂದ ಸ್ವಾಮಿಯ ಬಿಂಬ ಶುದ್ಧಿಯನ್ನು ಮಾಡಿಸಿದನು. ಆ ಸ್ವಾಮಿಗೆ ಗರ್ಭಾವತರಣ ಜನ್ಮಾಭಿಷೇಕಗಳೆಂಬ ನಿರ್ಭರ ಕಲ್ಯಾಣವಿಲ್ಲ. ಅದು ದರ್ಭಶಯನ ಆಕಾರ ಶುದ್ಧಿಗಳಲ್ಲಿ ಅಂತರ್ಭಾವವೆಂದು ಮಾಡಿಸಿ, ಯುವರಾಜಪಟ್ಟ ಮುಂತಾದ ವಿಧಿಗಳನ್ನು ಸುವಿವೇಕದಿಂದ ನಡೆಸಿ, ಪರಿನಿಷ್ಕ್ರಮಣ ವಿಧಿಯನ್ನು ಪರಮಾನಂದದಿಂದ ನೆರವೇರಿಸಿದನು.

ಮತ್ತೆ ಪ್ರತಿಷ್ಠಾಯಂತ್ರೋದ್ಧಾರವನ್ನು ಚಿತ್ತರದಿಂದ ಮಾಡಿಸಿದನು. ಸುತ್ತಿದ ದಳದ ಕರ್ಣಿಕೆಯಲ್ಲಿ ಉತ್ತಮ ದೇವತೆಗಳನ್ನು ಸ್ಥಾಪಿಸಿದನು. ಯವನಂದ್ಯಾವರ್ತ ವಲಯ ಮುಂತಾಗಿದ್ದ ಪ್ರವರ ಮಹಾಪೂಜೆಗಳನ್ನು ಅವರವರ ಆಹ್ವಾನ ಸ್ಥಾಪನಾದಿಗಳಿಂದ ವಿನಯಪೂರ್ವಕವಾಗಿ ಮಾಡಿಸಿದನು. ಚಿನ್ನದ ಪಾತ್ರೆಯಲ್ಲಿ ಹಾಲು ತುಪ್ಪ ಸಕ್ಕರೆಯನ್ನು ಕಲಸಿ, ಚಿನ್ನದ ಶಲಾಕೆಗಳಿಂದ ನೇತ್ರೋನ್ಮೀಲನ ವಿಧಿಯನ್ನು ಮಾಡಿದಾಗ–ಘಾತಿಕರ್ಮ ತೊಲಗಿದಂತೆ ತೆರೆ ಜಾರಿತು. ಭವ್ಯರು ಜಯಜಯ ಎಂದರು. ದೊರೆಗಳು ಶ್ರಾವಕರು ಸ್ವಾಮಿಯ ಚರಣಕ್ಕೆ ಕಾಣಿಕೆಯಿಕ್ಕಿ ಭಯಭಕ್ತಿಯಿಂದ ಸಾಷ್ಟಾಂಗ ವೆರಗಿದರು. 'ಅಯಮೇವ ಕೇವಲಿ' ಎಂದು ಯತಿಗಳು ಕ್ರಿಯೆಯ ಮಾಡಿದರು. ಹೀಗೆ-

ವಸು ರುತು ಶರ ಶಶಿ ಸಂಖ್ಯೆಯೊಳಗೆ ವರ್ತಿಸುವ ಶಕಾಬ್ದದೊಳಂದು।
ಎಸೆವ ಪಾರ್ಥಿವದ ಫಾಲ್ಗುಣ ಶುದ್ಧವೆನಿಪ ದ್ವಾದಶಿಯೊಳು ಜಿನಗೆ ಪ್ರತಿಷ್ಠೆ॥

ಆಯಿತು ಆ ಸಮಯದಲ್ಲಿ ಅಲ್ಲಿ ನೆರೆದಿದ್ದ ಭವ್ಯಸಂಘ ಮೂರು ಲಕ್ಷ.

ಹೀಗೆ ಪ್ರತಿಷ್ಠೆ ಮಾಡಿಸಿ, ಲೋಕಶಾಂತಿಗಾಗಿ ಮೂರು ದಿನ ಪರಿಯಂತ ಮಹಾ ವಿಭವದಿಂದ ಶಾಂತಿಕ ವಿಧಿಯನ್ನು ಮಾಡಿಸಿದನು. ಒಂದೊಂದು ಹೊತ್ತಿಗೆ ಒಬ್ಬೊಬ್ಬರ ಮನೆಯಲ್ಲಿ ಒಂದೊಂದು ಸಾವಿರ ಸಂಘಕ್ಕೆ ಸನ್ಮಾನದ ಊಣಿಸು. ಶ್ರಾವಕರು ಪರಮಾನ್ನ ಕಜ್ಜಾಯ ತುಪ್ಪ ಸಕ್ಕರೆ ಪರಿಪರಿಯ ಶಾಖೋಪದಂಶಗಳನ್ನೂ ಪರಿಮಳಿಸುವ ಶಾಲ್ಯನ್ನ ದಧಿಗಳನ್ನೂ ಬಡಿಸಿ, ಭಲಾ ಎನ್ನಿಸುವರು.

ದಿನವೊಂದಕ್ಕೆ ಇನ್ನೂರು ಕದನಿ ಬಿರುಸು ಬಾಣ! ಮನೆ-ಮನೆಯ ಮುಂದೆ ಆರತಿಗಳ ಸಿವಾಳಿ! ಸಿಂಗರಿಸಿದ ರಥದಲ್ಲಿ ಜಿನಬಿಂಬದ ಮಂಗಲೋತ್ಸವ! ಮುಂದುಗಡೆ ನಾಲ್ಕು ದಿಕ್ಕಿನಲ್ಲೂ ನಾಲ್ಕು ಗಣಗಳ ಆಚಾರ್ಯರು! ಧರ್ಮದಲ್ಲಿ ತನ್ನ ಮನೋರಥವನ್ನು ನಡಸುವಂತೆ ಆ ರಥವನ್ನು ಆ ಮುನಿಪನು ಎಳಸಿದನು. ಅಲ್ಲಲ್ಲಿ ಆಡುವ ಪಾತ್ರ ಭೋಗಗಳು! ಅಲ್ಲಲ್ಲಿ ಬಿರಿಸು ಬಾಣ! ಎಲ್ಲೆಲ್ಲಿ ನೋಡಿದರೂ ಹಲವು ಸೂರ್ಯರು ಬಂದ ಹಾಗೆ ಎತ್ತಿದ ಪಂಜು ಹಿಲಾಲು ದೀವಟಿಗೆಗಳ ಮೊತ್ತ! ಗಾಲಿಯ ಚೀತ್ಕಾರ

ದಿಕ್‌ಚಕ್ರವಾಲವನ್ನೆಲ್ಲ ವ್ಯಾಪಿಸಿತು! ನಾನಾ ವಾದ್ಯಗಳು ಮೊಳಗಿದುವು. ಆ ರಥದ
ಮುಂದುಗಡೆ ತೆರಪಿಲ್ಲದಂತೆ ಸೀಗುರಿ ಬೆಳ್ಗೊಡೆ ಧರ್ಮಚಕ್ರಧ್ವಜ ಎತ್ತಿ ಆಡಿದುವು.
ದೊರೆಗಳು ಹಲಬರ ಬಳಿ ಐದು ಸಾವಿರ ನೆರೆದು ಆ ತೋರಮಿಣಿಯನ್ನು ಹರುಷದಿಂದ
ಹಿಡಿದೆಳೆದರು. ಹೀಗೆ ಬೆಟ್ಟದಂಗಡಿಯಿಂದ ನೇಮಿಶಾಲಯದ ವರೆಗೆ ರಥವನ್ನು ಆ
ಗುರು ಎಳಸಿದನು. ಅಲ್ಲಿಂದ ರಥವನ್ನು ತಿರುಗಿಸಿ, ಮೊದಲಿನಂತೆ ಎಳಸಿ, ಬೆಟ್ಟದ
ಸನ್ನಿಧಿಯಲ್ಲಿ ನಿಲ್ಲಿಸಿ, ಶ್ರೀ ಗೊಮ್ಮಟನಾಥನ ಪಾದಕ್ಕೆ ನಿವಾಳಿಯಿಟ್ಟು ಎರಗಿದನು.

ಮೂರು ದಿವಸ ಮುಟ್ಟೆ ಜಿನನಿಗೆ ಅಭಿಷೇಕವನ್ನು ಚೆಚ್ಚರದಿಂದ ಮಾಡಿಸಿ,
ಬಳಿಕ ಸಾರವೆನ್ನಿಸುವ ಮಹಾ ಅಭಿಷೇಕಕ್ಕೆ ತಾನು ಪ್ರಾರಂಭವನ್ನು ಮಾಡಿಸಿದನು.
ಮೂವತ್ತೆರಡು ಕೋಲಿನ ಮಂಟಪದಲ್ಲಿ ಸಾವಿರದೆಂಟು ಕುಂಭಕ್ಕೆ ಆ ವಸುಗಿರಿಮಿತ
ಸೂತ್ರವಿನ್ಯಾಸವನ್ನು ಮಾಡಿಸಿದನು. ಆ ಕಲಶವೆಲ್ಲಕ್ಕು ತಿಲದಂತರದಿಂದ ತಂತುಗಳನ್ನು
ಸುತ್ತಿಸಿ, ಒಂದೊಂದು ಪದದಲ್ಲೂ ಒಂದೊಂದು ಪ್ರಸ್ಥಪ್ರಮಿತಶಾಲಿಯಿಂದ ರಚನೆ
ಮಾಡಿಸಿದನು.

ಕ್ಷೀರಸಮುದ್ರದಂತಹ ಆ ರಾಮಸಮುದ್ರದ ಜಲವನ್ನು ತರಿಸಬೇಕೆಂದು ಭವ್ಯ
ಜನರ ಕೈಯಲ್ಲಿ ಒಂದೊಂದು ನವ್ಯ ಕುಂಭಗಳನ್ನು ಕೊಟ್ಟು, ಸೇವ್ಯವೆನ್ನಿಸುವ ಜಲ-
ದೇವತೆಗಳನ್ನು ದಿವ್ಯ ಜಲಧಿಗಳಿಂದ ಮನ್ನಿಸಿ, ಜಲವನ್ನು ಶೋಧಿಸಿ, ಚಿನ್ನ ಬೆಳ್ಳಿಯ
ಕುಂಭಗಳೊಳಗೆ ತುಂಬಿಸಿ, ಆ ಕುಂಭಗಳನ್ನು ಪಲ್ಲಕ್ಕಿಯೊಳಗಿಟ್ಟು, ಮಿಕ್ಕ ಪಲ್ಲವ
ಶೋಭಿತ ಕುಂಭಗಳನ್ನು ಭವ್ಯರ ಕೈಯಲ್ಲಿ ಕೊಟ್ಟು, ಮುಂದೆ ನರ್ತನ ವಾದ್ಯ ಸಂಗೀತ
ಗಳಾಗುತ್ತಿರಲು ಆ ಮುನಿಯು ಭವ್ಯವೃಂದದೊಡನೆ ಗಿರಿಯನ್ನು ಏರಿದನು.

ಒಂದೊಂದು ಕಲಶದ ಅಡಿಗೆ ಒಂದೊಂದು ಪ್ರಸ್ಥವ್ರೀಹಿಯನ್ನು ಹರಹಿ, ಅಕ್ಷತೆ
ಯಿಂದ ಕಮಲಗಳನ್ನೂ ಸ್ವಸ್ತಿಕವನ್ನೂ ಬರೆದು, ಫಲಪುಷ್ಪಪಲ್ಲವಗಳಿಂದ ಕಲಶವನ್ನು
ಸಿಂಗರಿಸಿದರು. ಕೋಣಗಳಲ್ಲೂ ಮಧ್ಯದಲ್ಲೂ ದ್ರೋಣಪ್ರಮಾಣದ ಕುಂಭಗಳನ್ನು
ತಂದಿಟ್ಟರು, ಮಂಗಲದ್ರವ್ಯಗಳನ್ನೂ ಗಂಧೋದಕಗಳನ್ನೂ ಊನವಿಲ್ಲದೆ ತಂದಿಟ್ಟರು.
ಕಲಶಾರ್ಚನೆಯನ್ನು ಕ್ರಮದಿಂದ ಮಾಡಿಸಿಯಾದ ಬಳಿಕ, ಮಂತ್ರ ಪೂರ್ವಕವಾಗಿ
ಕಲಶೋದ್ಧರಣವಾಯಿತು. ಭವ್ಯವೃಂದವನ್ನು ಸಾಲಾಗಿ ನಿಲ್ಲಿಸಿ, ಮೊದಲು ಇಂದ್ರನಿಂದ
ಮಾಡಿಸಿದನು.

ಎರಡು ಭುಜಗಳ ಸನ್ನಿಧಿಯಲ್ಲಿ ಇಬ್ಬರು, ವರಮಸ್ತಕದ ಸನ್ನಿಧಿಯಲ್ಲಿ ಇಬ್ಬರು
ಸ್ಥಿರವಾಗಿ ನಿಂತು, ಜಯ ಜಯ ಎಂದು ಕುಂಭದ ಜಲವನ್ನು ಸುರಿದರು. ಹಿಮಗಿರಿ
ಯಿಂದ ಗಂಗಾಸಿಂಧುಗಳು ಬರುವಂತೆ, ಆ ಜಲವು– ಭೇರಿಯ ಆ ಗಂಭೀರನಾದದ
ಜೊತೆಗೆ ಭೋರೆಂದು ಆ ಸಾವಿರದೆಂಟು ಕುಂಭಗಳ ನೀರೂ ಕೆಳಗಿಳಿಯಿತು. ಭವ್ಯರು
ಜಯ ಜಯ ಎಂದರು. ಪಟ್ಟದ ಇಂದ್ರರು ಪಟ್ಟೆ ಪೀತಾಂಬರಗಳನ್ನು ನಿವಾಳಿಯಿಟ್ಟರು.

ಅನಂತರ ಅಮೃತರಸಕ್ಕೆ ಸಮವೆನಿಸುವ ಚೆಂದೆಂಗಿನ ವಿಮಲಶೀತಲ ಜಲದಿಂದ
ಕ್ರಮವಾಗಿ ಸಾವಿರದೆಂಟುಸಲ ಮಜ್ಜನ ಮಾಡಿಸಿದರು. ಲಕ್ಷ ತೆಂಗಿನಕಾಯಿಯ ಸುಳಿಯ

ಮಾಡಿಸಿ, ಪೂಜಿಸಿದರೆ- ಸುರರು ಬಂದು ಮಾಡುವ ಮಂದಾರದ ಪುಷ್ಪವೃಷ್ಟಿಯಂತ್ತಿತ್ತು; ಆಕಾಶದಲ್ಲಿ ನಿಂತು ನೋಡುವ ಸುರನಿಕರದ ಕಣ್‌ಬೆಳಕುಗಳೇ ಈ ಸುಳಿಗಳ ಆಕಾರ ವಾದಂತಿತ್ತು. ತದನಂತರ ಕದಳಿಯ ಪಕ್ವಫಲಗಳ ಅಭಿಷೇಕವನ್ನು ಮಾಡಿದರು. ಜಿನನ ಅಂಗಸಂಗದಿಂದ ಅವಕ್ಕೆ ಸುವಾಸನೆ ಬಂತು. ಮುಳ್ಳು ಇದು ವರೆಗೆ ನಮಗಾಯಿತು, ಇದನ್ನು ನೀನು ಹೋಗಲಾಡಿಸು ಎಂಬಂತೆ ಹಲಸಿನ ತೊಳೆಗಳು ಜಿನನಿಗೆ ಅಭಿಷೇಕ ಮಾಡಿದುವು.

ಹಿಂದೆ ನೀನು ನಮ್ಮನ್ನು ಬಿಲ್ಲಾಗಿ ಮಾಡಿಕೊಂಡಿದ್ದೆ. ಈಗ ನೀನು ತಪಸ್ಸಿನಿಂದ ತಾಪಪಟ್ಟಂತೆ ನಾವೂ ಬೆಂಕಿಯಿಂದ ತಪ್ತರಾಗಿದ್ದೇವೆ– ಎಂಬಂತೆ ಕಬ್ಬಿನಿಂದಾದ ಬೆಲ್ಲದ ಧಾರೆ ಮೇಲಿನಿಂದ ಬಂದು ಜಿನನ ಪಾದಕ್ಕೆ ಬಿದ್ದುವು. ಮುನ್ನೂರು ಕೊಡಗಳ ಆ ಬೆಲ್ಲಸಕ್ಕರೆಯ ಅಭಿಷೇಕದಿಂದ ಆ ಬಿಂಬ, ಮೊದಲು ರತ್ನದ ಹಾಗಿದ್ದು, ಬಳಿಕ ಚಿನ್ನದಂತೆ ಕಂಡಿತು. ಆ ಬೆಲ್ಲದ ಪುಡಿಯು ಜಿನನ ವಶೀಕರಣಕ್ಕಾಗಿ ಮುಕ್ತಿರಾಜೀವ-ಮುಖಿಯು ಚೆಲ್ಲಿದ ಕುಂಕುಮದ ಚೂರ್ಣದಂತಿತ್ತು. ಅನಂತರ ಘೃತದಿಂದ ಅಭಿಷೇಕ ಮಾಡಿದರು. ದಂಡಾಕಾರವಾದ ಮಿಂಚಿನ ಖಂಡಮಾಲೆಗಳಂತೆ ಇಳಿತಂದ ಆ ತುಪ್ಪದ ಧಾರೆ 'ನೀನು ನನ್ನ ಮೇಲಿನ ಸ್ನೇಹವನ್ನು ಬಿಟ್ಟರೂ ನಾನು ನಿನ್ನನ್ನು ಬಿಡೆನು' ಎಂದು ಬಂದ ತೇಜೋಲೇಶ್ಯದ ಹಾಗಿತ್ತು.

ಹೀಗೆ ಮುನ್ನೂರು ಕೊಡದ ಘೃತದ ಅಭಿಷೇಕವಾದ ಮೇಲೆ ಗೋಕ್ಷೀರದಿಂದ ಮಜ್ಜನವನ್ನು ಮಾಡಿಸಿದರೆ ಸಾಕ್ಷಾತ್ ರಜತದ ಬಿಂಬವೇ ಇದು ಎಂಬಂತೆ ಆಯಿತು. ಶಿರದಿಂದ ಪಾದಪರ್ಯಂತ ತೆರತೆರನಾದ ಚೆಲ್ವಿಕೆ ತಲೆದೋರಿತು. ಹೀಗೆ ಸಾವಿರದ ಎಂಟು ಕುಂಭಗಳಲ್ಲಿ ಪಾವನ ಕ್ಷೀರವನ್ನು ತಂದು ದೇವನ ಮಸ್ತಕದಲ್ಲೂ ಭುಜಯುಗದಲ್ಲೂ ಸೂಸಿದ ಬಳಿಕ ಘನಗೊಂಡ ಹಿಮಖಂಡದಂತೆ ಪಾಂಡುರವಾದ ಕೆನೆಮೊಸರನ್ನು ಅಭಿಷೇಕ ಮಾಡಿದರು. ಕೊಡ ಕೊಡದಲ್ಲಿ ತುಂಬಿದ ದಧ್ಯಭಿಷೇಕ ತಡೆಯದೆ ನಡೆಯಿತು.

ಈ ಬೇರೆ ಬೇರೆ ಒಂದೊಂದು ತೆರದ ಅಭಿಷೇಕಕ್ಕೂ ಸಾರಜಲಾದಿಗಳಿಂದ ಆರಾ-ಧಿಸಿ, ಪಟ್ಟೆಸೀರೆಗಳನ್ನು ನಿವಾಳಿಸಿದರು. ಅನಂತರ, ಪಿಷ್ಟ ಚೂರ್ಣ ಕಲ್ಕ ಮುಂತಾದ ವಿಶಿಷ್ಟ ವಸ್ತುಗಳಿಂದ ಜಿನನ ಸಾಷ್ಟಾಂಗದೊಳಗುಳ್ಳ ಸ್ನೇಹಮೋಹವನ್ನು ತೆಗೆದರು. ಮತ್ತೆ ಬಂಧುರವಾದ ಕುಂಕುಮ ಕರ್ಪೂರ ಮಿಶ್ರಿತ ಗಂಧದಿಂದ ಅಭಿಷೇಕ ಮಾಡಿದರು. ಮಂದಾರ ಮಲ್ಲಿಗೆ ಕುಂದ ಸೇವಂತಿಗೆ ಬಂಧುಗೆ ಜಾಜಿ ಮುಂತಾದ ಕಂದದ ಹೂವಿನ ಮಳೆ ಕರೆದರು.

ಹೀಗೆ ಮಹಾಭಿಷೇಕವನ್ನು ಮಾಡಿಸಿ, ಆ ಮುನಿನಾಥನು ಅತ್ಯಾನಂದದಿಂದ ಅಂತರಂಗಶುದ್ಧಿಯಿಂದ ಜಿನನ ಮುಂದೆ ಸಾಷ್ಟಾಂಗವೆರಗಿದನು; ಆನಂದಾಶ್ರು ಜಲಗಳಿಂದ ಆಗ ಸ್ನಾನಮಾಡಿ ಹೋದನು. ಅನಂತರ, ಹತ್ತು ಕುಂಡಗಳಲ್ಲಿ ಆ ಹತ್ತು ಇಂದ್ರರ ಕೈಯಿಂದ ಬೃಹತ್ ಶಾಂತಿವಿಧಿಯನ್ನು ಮತ್ತೆ ವಿಸ್ತಾರವಾಗಿ ಮಾಡಿಸಿದನು. ಅದರಿಂದ

ಬಳಿಕ ನವಕುಂಡಗಳಲ್ಲಿ ಲಕ್ಷಣಯುಕ್ತವಾಗಿ ನವಗ್ರಹಶಾಂತಿಯನ್ನು ಮಾಡಿಸಿದನು. ಆ ಬಳಿಕ ಭಟ್ಟಾರಕಾಚಾರ್ಯರಿಗೆ ಪಟ್ಟೆಯ ಹಚ್ಚಡಗಳನ್ನೂ ಉಳಿದ ಯತಿಗಳಿಗೆ ಒಂದೊಂದು ವರಹದ ಬಿಳಿಯ ಹಚ್ಚಡಗಳನ್ನೂ ಕೊಟ್ಟಂತೆ ಆರ್ಯಿಕಾ ಸಮುದಾಯಕ್ಕೂ ಹಚ್ಚಡಗಳನ್ನು ಇತ್ತು ಮನ್ನಿಸಿದನು.

ಹೀಗೆ ಶ್ರೀ ಲಲಿತಕೀರ್ತ್ಯಾಚಾರ್ಯನು ಏಳುನೂರು ತಂಡಕ್ಕೆ ಅಂತರಂಗ ಶುದ್ಧಿಯಿಂದ ಸಂಘಪೂಜೆಯನ್ನು ಮಾಡಿದನು. ವಿದ್ವಾಂಸರಿಗೆ ಅವರ ಮನೋರಥ ಪೂರ್ಣವಾಗುವಂತೆ ಕೊಟ್ಟನು. ಯಾಚಕರಿಗೆ ಭೂರಿದಾನಗಳನ್ನು ಕೊಟ್ಟನು. ಭೂರಮಣರಿಗೆ ಉಡುಗೊರೆಗಳನ್ನು ಕೊಟ್ಟನು. ದಾನಸನ್ಮಾನದಿಂದ ಚತುಸ್ಸಂಘವನ್ನು ತಾನು ಮನ್ನಿಸಿದನು. ನಾನಾ ದೇಶದ ದೊರೆಗಳೂ ಶ್ರಾವಕರೂ ಆನಂದದಿಂದ ಬಂದು, ಗಂಧ ಅಕ್ಷತೆ ಪುಷ್ಪ ನೈವೇದ್ಯ ದೀಪ ಧೂಪ ಸತ್ಫಲಗಳಿಂದ ಲಲಿತಕೀರ್ತ್ಯಾಚಾರ್ಯನ ಪಾದಪದ್ಮವನ್ನು ಭಕ್ತಿಯಿಂದ ಒಲಿದು ಪೂಜಿಸಿದರು. ಪಟ್ಟೆಯ ಹಚ್ಚಡಗಳನ್ನು ಕಾಣಿಕೆಕೊಟ್ಟು, ನಾಣ್ಯಗಳನ್ನೂ ರತ್ನಗಳನ್ನೂ ಮುಂದೆ ಇಟ್ಟು, ಆ ಭವ್ಯರು ಪಟ್ಟದ ಗುರುವಿನ ಮುಂದೆ ಸಾಷ್ಟಾಂಗವೆರಗಿದರು.

ಅನಂತರ ಚಿನ್ನದ ಬೆಳ್ಳಿಯ ಅಂಡೆಗಳಲ್ಲಿ ಕುಂಕುಮ ರಸವನ್ನು ತುಂಬಿ, ಹೊಸ ಹರೆಯದ ಹೊಂತಕಾರಿಗಳು ಓಕುಳಿಯಾಡಿದರು. ಉಟ್ಟ ಚಲ್ಲಣ ದಟ್ಟಿ ಚೊಗೆ ಕುಲ್ಲಾಯಿ, ಇಟ್ಟ ಕಸ್ತೂರಿ ಬಟ್ಟು, ಮೆರೆವ ಕಟ್ಟಾಳುಗಳು ವೀರಶೃಂಗಾರದಿಂದ ಜಲವನ್ನು ಇಟ್ಟಾಡಿದರು. ಹೀಗೆ ಬೆಟ್ಟದಲ್ಲಿ ವಸಂತವನಾಡಿದ ಮೇಲೆ ಪಟ್ಟಣದಲ್ಲಿಯೂ ಆಡಿದರು. ಚಿನ್ನ ಬೆಳ್ಳಿಯ ಜೀರ್ಕೊಳವೆಗಳಲ್ಲಿ ಕುಂಕುಮ ಪನ್ನೀರುಗಳನ್ನು ತುಂಬಿ ಆ ಮನ್ನೆಯರು ವಸಂತವಾಡಿದರು. ಹೀಗೆ ಪ್ರತಿಷ್ಠಾವಿಧಿಯನ್ನು ನಿರ್ವರ್ತಿಸಿ, ಆ ಮುನಿರಾಯನು ಸರ್ವರನ್ನೂ ತಮ್ಮ ತಮ್ಮ ಪುರಕ್ಕೆ ಬೀಳ್ಕೊಟ್ಟನು.

**—ಜಿ. ಪಿ. ರಾಜರತ್ನಂ.**

